ಸಮಾಜ ಪರಿಚಯ ಪಾಠಗಳು

( 3ನೆಯ ಇಯತ್ತೆಗಾಗಿ )

# ವಿಜಾಪುರ ಜಿಲ್ಲೆಯ ಸಾಮಾನ್ಯ ಪರಿಚಯ



ಲೇಖಕರು

ಪ್ರ. ಗೋ. ಕುಲಕರಣಿ



This book is printed on D/C white printing paper
20″×30″ 24 lbs.

ಮೊದಲನೆಯ ಆವೃತ್ತಿ
( 100 ಪ್ರತಿಗಳು )

1960 ಬೆಲೆ:

# 1 ನಮ್ಮ ಜಿಲ್ಲೆ

ಮಕ್ಕಳೆ, ನಿಮ್ಮ ಊರಿನ ಕೆಲಸದ ಮೇಲ್ವಿಚಾರಣೆಗೆ ಬರುವ ತಹಸಿಲದಾರನನ್ನು ನೀವು ನೋಡಿರುವಿರಷ್ಟೆ. ಈ ತಹಸಿಲದಾರನು ನಿಮ್ಮ ಊರಂಥ ಹಲವು ಊರುಗಳ ಮೇಲ್ವಿಚಾರಣೆ ಮಾಡುತ್ತಾನೆ. **ತಹಸಿಲದಾರನ ಅಧಿಕಾರಕ್ಕೆ ಒಳಪಟ್ಟ ಪ್ರದೇಶಕ್ಕೆ ತಾಲೂಕು ಅನ್ನುತ್ತಾರೆ** ತಾಲೂಕಿನ ಅಧಿಕಾರಿಯಾದ ತಹಸಿಲದಾರನು ಯಾವ ಊರಲ್ಲಿ ಇರುವನೋ ಆ ಊರ ಹೆಸರು ಆ ತಾಲೂಕಿಗೆ ಬರುತ್ತದೆ. ನಿಮ್ಮ ತಾಲೂಕು ಯಾವದು ?

ತಾಲೂಕಿಗಿಂತ ಭಾಗವು ಚಿಕ್ಕದಿದ್ದರೆ ಅದಕ್ಕೆ ಪೇರಾ ಇಲ್ಲವೆ ಮಹಾಲ ಅನ್ನುವರು. ಅದರ ಮೇಲಿನ ಅಧಿಕಾರಿಗೆ ಡೆಪುಟಿ ತಹಸಿಲ ದಾರ ಅನ್ನುವರು.

ತಾಲೂಕುಗಳ ಅಧಿಕಾರಿಗಳಾದ ತಹಸಿಲದಾರರ ಕೆಲಸದ ಮೇಲ್ವಿಚಾರಣೆ ಮಾಡುವ ಒಬ್ಬ ಅಧಿಕಾರಿ ಇರುವನು. ಅವನಿಗೆ 'ಡೆಪುಟಿ ಕಮಿಶನರ, ಎಂದು ಅನ್ನುವರು. ಡೆಪುಟಿ ಕಮಿಶನರನ ಅಧಿಕಾರದಲ್ಲಿ ತಾಲೂಕು ಮತ್ತು ಪೇರಾಗಳು ಇರುವವು. **ಡೆಪುಟಿ ಕಮಿಶನರನ ಅಧಿಕಾರಕ್ಕೆ ಒಳಪಟ್ಟ ಪ್ರದೇಶಕ್ಕೆ ಜಿಲ್ಲೆ** ಎಂದು ಹೆಸರು. ಈ ಅಧಿಕಾರಿಯು ಯಾವ ಪಟ್ಟಣದಲ್ಲಿ ಇರುವನೋ ಆ ಪಟ್ಟಣದ ಹೆಸರನ್ನೇ ಸಾಮಾನ್ಯವಾಗಿ ಆ ಜಿಲ್ಲೆಗೆ ಕೊಡುತ್ತಾರೆ. ಪೇರಾ, ತಾಲೂಕು, ಜಿಲ್ಲೆ ಇವು ಸರಕಾರದ ಅನುಕೂಲಕ್ಕಾಗಿ ಮಾಡಿಕೊಂಡ ಭಾಗಗಳು. ನಮ್ಮ ಜಿಲ್ಲೆಯ ಅಧಿಕಾರಿಯಾದ ಡೆಪುಟಿ ಕಮಿಶನರನು ವಿಜಾಪುರದಲ್ಲಿ ಇರುವನು. ಆದಕ್ಕಾಗಿ ನಮ್ಮ ಜಿಲ್ಲೆಗೆ **ವಿಜಾಪುರ ಜಿಲ್ಲೆ** ಎಂದು ಕರೆಯುವರು.

ನೀವು 'ಭಾರತ ಮಾತೆಗೆ ಜಯವಾಗಲಿ' ಎಂದು ಹೇಳುವದಿಲ್ಲವೇ ? ಭಾರತವು ನಮ್ಮ ದೇಶ. ಭಾರತ ದೇಶದಲ್ಲಿ ಹದಿನಾಲ್ಕು ರಾಜ್ಯಗಳು ಇರುತ್ತವೆ. ಇವು ಭಾರತದಲ್ಲಿಯ ಒಂದೊಂದು ಭಾಗಗಳು. ನಾವು "ಉದಯವಾಯಿತು ನಮ್ಮ ಚೆಲುವ ಕನ್ನಡ ನಾಡು" ಎಂದು ಹಾಡುತ್ತೇವೆ. ಇದು ನಮ್ಮ ನಾಡಗೀತೆ ನಾವಿರುವ ಭಾಗಕ್ಕೆ ಕನ್ನಡ ನಾಡು ಎಂದು ಹೆಸರು ಕನ್ನಡವು ಈ ನಾಡಿನ ಭಾಷೆ. ಕನ್ನಡನಾಡು ಭಾರತದಲ್ಲಿಯ ಹದಿನಾಲ್ಕು ರಾಜ್ಯಗಳಲ್ಲಿ ಒಂದು. ಇದಕ್ಕೆ **ಮೈಸೂರ ರಾಜ್ಯ** ಎಂದು ಹೇಳುತ್ತಾರೆ.

ಇದು ನೋಡಿರಿ. ಇದು ವಿಜಾಪುರ ಜಿಲ್ಲೆಯ ನಕಾಶ. ಇದರಲ್ಲಿ ಜಿಲ್ಲೆಯ ಸೀಮೆ (ಮೇರೆ) ಯನ್ನು ಕಪ್ಪು ಗೆರೆಯಿಂದ ತೋರಿಸಿದೆ. ಅದರೊಳಗಿನ ತಾಲೂಕು ಮತ್ತು ಪೇಠಾಗಳ ಮೇರೆಗಳನ್ನು ಟಿಮ್ಕ್ಕಿ ಟಿಮ್ಕ್ಕಿ ಗೆರೆಗಳಿಂದ ತೋರಿಸಿದೆ.

ಈ ನಕಾಶವನ್ನು ನೋಡಿ ವಿಜಾಪುರ ಜಿಲ್ಲೆಯಲ್ಲಿ ಯಾವ ಯಾವ ತಾಲೂಕುಗಳು ಮತ್ತು ಮಹಾಲ ಇರುತ್ತವೆಂಬದನ್ನು ಹೇಳಿರಿ.

## ವಿಜಾಪುರ ಜಿಲ್ಲೆಯಲ್ಲಿಯ ತಾಲೂಕುಗಳು:

**1 ಸಿಂದಗಿ 2 ಇಂಡಿ 3 ವಿಜಾಪುರ 4 ಬಾಗೇವಾಡಿ 5 ಜಮಖಂಡಿ 6 ಮುಧೋಳ 7 ಬಾಗಿಲುಕೋಟೆ 8 ಬಾದಾಮಿ 9 ಹುನಗುಂದ 10 ಮುದ್ದೇಬಿಹಾಳ.**

**ಪೇಠಾ:— ಬೀಳಗಿ.**

ಈಗ ವಿಜಾಪುರ ಜಿಲ್ಲೆಯ ಸುತ್ತಲು ತಿರುಗಿ ಈ ಜಿಲ್ಲೆಗೆ ಹೊಂದಿ ಯಾವ ಯಾವ ಪ್ರದೇಶಗಳು ಇರುತ್ತವೆಂಬದನ್ನು ನೋಡಿರಿ

ಉತ್ತರ ದಿಕ್ಕಿನ ಪೂರ್ವ ಬದಿಯಿಂದ ಪ್ರಾರಂಭಿಸಿ ಪಶ್ಚಿಮಕ್ಕೆ ಸಾಗಿ ನೋಡುತ್ತ ಬನ್ನಿರಿ. ವಿಜಾಪುರ ಜಿಲ್ಲೆಯ ಮೇರೆಗಳು ಕೆಳಗಿನಂತೆ ಇರುತ್ತವೆ.

**ಉತ್ತರದಲ್ಲಿ**— ಗುಲ್ಬರ್ಗ ಜಿಲ್ಲೆ ಮತ್ತು ಸೊಲ್ಲಾಪುರ ಜಿಲ್ಲೆ.
ಪಶ್ಚಿಮದಲ್ಲಿ—ದಕ್ಷಿಣ ಸಾತಾರೆ ಜಿಲ್ಲೆ, ಬೆಳಗಾವಿ ಜಿಲ್ಲೆ.
ದಕ್ಷಿಣದಲ್ಲಿ—ಧಾರವಾಡ ಜಿಲ್ಲೆ, ರಾಯಚೂರ ಜಿಲ್ಲೆ.
ಪೂರ್ವದಲ್ಲಿ— ರಾಯಚೂರ ಜಿಲ್ಲೆ, ಗುಲ್ಬರ್ಗ ಜಿಲ್ಲೆ.

### ಅಭ್ಯಾಸ

ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಸ್ಥಳಗಳನ್ನು ತುಂಬಿ ಪೂರ್ಣ ಮಾಡಿರಿ.

1 ವಿಜಾಪುರ ಜಿಲ್ಲೆಯಲ್ಲಿ .... ....... . ತಾಲೂಕುಗಳು ಇರುತ್ತವೆ.
2 ವಿಜಾಪುರ ಜಿಲ್ಲೆಯ ಪಶ್ಚಿಮಕ್ಕೆ .. ..... ಜಿಲ್ಲೆಗಳು ಇರುವವು
3 ಇಂಡಿ ತಾಲೂಕು ವಿಜಾಪುರ ಜಿಲ್ಲೆಯಲ್ಲಿ ...... .... ಬದಿಗೆ ಇರುವದು.
4 ವಿಜಾಪುರ ಜಿಲ್ಲೆಯು ಧಾರವಾಡ ಜಿಲ್ಲೆಯ ... ... ... ದಿಕ್ಕಿಗೆ ಇರುವದು.

---

## 2 ಪ್ರಾಕೃತಿಕ ಲಕ್ಷಣ

### ಗುಡ್ಡಗಳು-ನದಿಗಳು

ಭೂಮಿಯು ಎಲ್ಲ ಕಡೆಗೂ ಸಮನೆಲದ್ದಾಗಿ ಇರುವದಿಲ್ಲ. ಏರಿಳಿತಗಳಿಂದ ಕೂಡಿದೆಯೆಂಬುದು ನಿಮಗೆ ಗೊತ್ತಿದೆ. ವಿಜಾಪುರ ಜಿಲ್ಲೆಯಲ್ಲಿ ಹರಿಯುವ ನದಿಗಳನ್ನು ನೋಡಿರಿ. ಅವು ಪಶ್ಚಿಮದಿಂದ ಪೂರ್ವಕ್ಕೆ ಹರಿದಿರುತ್ತವೆ. ಇದರಿಂದ ಈ ಜಿಲ್ಲೆಯ ಭೂಮಿಯು

ಸಾಮಾನ್ಯವಾಗಿ ಪಶ್ಚಿಮ ದಿಕ್ಕಿನಲ್ಲಿ ಏರಾಗಿದ್ದು ಪೂರ್ವಕ್ಕೆ ಇಳುಕಲಾಗುತ್ತ ಹೋಗಿರುವದೆಂಬುದು ಕಂಡು ಬರುತ್ತದೆ. †

ವಿಜಾಪುರ ಜಿಲ್ಲೆಯು ಬೈಲುನಾಡು. ಹೇಳಿಕೊಳ್ಳುವಂಥ ಗುಡ್ಡಗಳು ಈ ಜಿಲ್ಲೆಯಲ್ಲಿ ಇರುವದೇ ಇಲ್ಲ. ಈ ಜಲ್ಲೆಯಲ್ಲಿ ಹರಿದಿರುವ ಕೃಷ್ಣಾನದಿಯ ಉತ್ತರದ ಬೈಲಿನಲ್ಲಿ ಗುಡ್ಡಗಳೇ ಇರುವದಿಲ್ಲ. ಈ ಭಾಗದ ಭೂಮಿಯು ತೆರೆಗಳಂತೆ ತಗ್ಗುದಿನ್ನೆಗಳಿಂದ ಕೂಡಿದೆ. ಕೆಲವು ಕಡೆಯಲ್ಲಿ ಇರುವ ದೊಡ್ಡ ದಿನ್ನೆಗಳು ಗುಡ್ಡಗಳಂತೆ ಕಾಣುತ್ತವೆ. ಇಂಡಿ ತಾಲೂಕಿನ ನೈಋತ್ಯ ಮೂಲೆಯಲ್ಲಿ ಮತ್ತು ಬಾಗೇವಾಡಿಯ ಹತ್ತರ ಇಂಥ ದೊಡ್ಡ ದಿನ್ನೆಗಳು ಇರುತ್ತವೆ. ಡೋಣಿನದಿಯ ಉತ್ತರದಲ್ಲಿ ಒಂದು ದೊಡ್ಡ ದಿನ್ನೆಯ ಸಾಲು ಹಬ್ಬಿದೆ. ಕೃಷ್ಣಾನದಿಯ ದಕ್ಷಿಣ ಭಾಗದಲ್ಲಿ ಹಲಕೆಲವು ಗುಡ್ಡಗಳು ಇರುತ್ತವೆ. ಇವು ಮುಖ್ಯವಾಗಿ ಮೂರು ಸಾಲುಗಳಲ್ಲಿ ಹಬ್ಬಿವೆ. ಇವುಗಳಲ್ಲಿ ಒಂದು ಸಾಲು ಕೃಷ್ಣಾ-ಘಟಪ್ರಭಾ ನದಿಗಳ ಮಧ್ಯದಲ್ಲಿ ಹಬ್ಬಿದೆ. ಇದು ಜಮಖಂಡಿ ತಾಲೂಕಿನ ದಕ್ಷಿಣ ಭಾಗದಲ್ಲಿ ಪೂರ್ವ ಪಶ್ಚಿಮವಾಗಿ ಹಬ್ಬಿದ್ದು ಅಲ್ಲಿಂದ ಬೀಳಗಿ ಪೇಠಾದಲ್ಲಿ ಬೀಳಗಿಯ ವರೆಗೆ ಹೋಗಿ ತಪ್ಪಲಿನ ರೂಪ ಹೊಂದಿದೆ. ಕೃಷ್ಣಾ-ಘಟಪ್ರಭಾ ನದಿಗಳ ನಡುವಿನ ಇನ್ನೊಂದು ಸಾಲು ಬೀಳಗಿ ಪೇಠಾದಲ್ಲಿ ಘಟಪ್ರಭೆಯ ಉತ್ತರದಲ್ಲಿ ನದಿಯ ದಂಡೆಗುಂಟ ಹಬ್ಬಿದ್ದು ಅದು ಬಾಗಿಲುಕೋಟೆ ತಾಲೂಕಿನಲ್ಲಿ ಹೆರಕಲ್ಲಿನ ಹತ್ತರ ಘಟಪ್ರಭೆಯನ್ನು ದಾಟಿ ಮಲಪ್ರಭಾ ನದಿಯ ಉತ್ತರದಿಂದ ಬರುವ ಸಾಲಿಗೆ ಹೋಗಿ ಕೂಡಿದೆ. ಮೂರನೆಯ ಸಾಲು ಬಾದಾಮಿ ತಾಲೂಕಿನಲ್ಲಿ ಮಲಪ್ರಭಾನದಿಯ ಉತ್ತರ ಬದಿಯಲ್ಲಿ ಹಬ್ಬಿದ್ದು ಅಮೀನಗಡದ

---

† ಶಿಕ್ಷಕರು ನಕಾಶದಲ್ಲಿಯ ಗುಡ್ಡ, ನದಿ ಇವುಗಳ ಗುರುತುಗಳನ್ನು ವಿದ್ಯಾರ್ಥಿಗಳಿಗೆ ಹೇಳಿ ಕೊಡಬೇಕು.

ಹತ್ತರ ಘಟಪ್ರಭೆಯ ಉತ್ತರದಲ್ಲಿ ಹಬ್ಬಿದ ಗುಡ್ಡದ ಸಾಲಿಗೆ ಹೋಗಿ ಕೂಡಿದೆ. ಬಾದಾಮಿ, ಬಾಗಿಲುಕೋಟೆ ತಾಲೂಕುಗಳು, ಹುನಗುಂದ ತಾಲೂಕಿನ ಪಶ್ಚಿಮಭಾಗ ಇವು ಗುಡ್ಡದ ಪ್ರದೇಶಗಳಾಗಿವೆ. ಆದರೆ ಎತ್ತರವಾದ ಗುಡ್ಡಗಳು ಈ ಜಿಲ್ಲೆಯಲ್ಲಿ ಎಲ್ಲಿಯೂ ಇರುವದಿಲ್ಲ.

**ನದಿಗಳು:—** ಈ ಜಿಲ್ಲೆಯಲ್ಲಿ ಭೀಮಾ, ಡೋಣಿ, ಕೃಷ್ಣಾ, ಘಟಪ್ರಭಾ, ಮಲಪ್ರಭಾ ಎಂಬ ಐದು ಹೊಳೆಗಳು ಹರಿದಿರುತ್ತವೆ. ಹೀಗೆ ವಿಜಾಪುರ ಜಿಲ್ಲೆಯು ಹೇಳಿಕೊಳ್ಳುವದಕ್ಕೆ ಐದು ಹೊಳೆಗಳ ನಾಡಾಗಿದೆ. ಆದರೆ ಈ ಹೊಳೆಗಳಿಂದ ಅಲ್ಲಿಯ ಭೂಮಿಗೆ ಆಗಬೇಕಾದಷ್ಟು ಲಾಭವಾಗಿಲ್ಲ.

**ಭೀಮಾ:—** ಈ ಹೊಳೆಯು ಪುಣೆ ಜಿಲ್ಲೆಯಲ್ಲಿ ಸಹ್ಯಾದ್ರಿಯಲ್ಲಿ ಹುಟ್ಟಿ ಸೋಲ್ಲಾಪುರ ಜಿಲ್ಲೆಯೊಳಗಿಂದ ಹಾಯ್ದು ಈ ಜಿಲ್ಲೆಯ ಉತ್ತರದ ಮೇರೆಯಾಗಿ ಹರಿದಿದೆ.

**ಡೋಣಿ:—** ಇದು ಇದೇ ಜಿಲ್ಲೆಯಲ್ಲಿ ವಿಜಾಪುರ ತಾಲೂಕಿನಲ್ಲಿ ಹುಟ್ಟಿ ಬಾಗೇವಾಡಿ, ಮುದ್ದೇಬಿಹಾಳ, ಸಿಂದಗಿ ತಾಲೂಕುಗಳಲ್ಲಿ ಹರಿದು ಗುಲ್ಬರ್ಗಜಿಲ್ಲೆಯನ್ನು ಸೇರಿ ಕೃಷ್ಣಾ ನದಿಗೆ ಕೂಡುತ್ತದೆ. ಇದು ಉಪ್ಪಿನ ಭೂಮಿಯಲ್ಲಿ ಹರಿದಿರುವದರಿಂದ ಇದರ ನೀರು ಸಾಳು. ಆದ್ದರಿಂದ ನದಿಯ ದಂಡೆಗೆ ತೋಟ ಪಟ್ಟಿಗಳು ಆಗುವಂತಿಲ್ಲ. ಆದರೆ ಇದರ ಎಡಬಲದಲ್ಲಿ ಸಣ್ಣ ಎರೆಯ ಭೂಮಿಯಿದ್ದು ಅದು ಬೆಳೆಯುಳ್ಳದ್ದೆಂದು ಹೆಸರಾಗಿದೆ.

**ಕೃಷ್ಣಾ:—** ಇದು ಸಾತಾರೆ ಜಿಲ್ಲೆಯಲ್ಲಿರುವ ಮಹಾಬಳೇಶ್ವರದ ಹತ್ತರ ಸಹ್ಯಾದ್ರಿಯಲ್ಲಿ ಹುಟ್ಟಿದೆ. ಕೊಲ್ಲಾಪುರ, ದಕ್ಷಿಣ

ಸಾತಾರೆ, ಬೆಳಗಾವಿ ಜಿಲ್ಲೆಗಳೊಳಗಿಂದ ಹರಿದು ಬಂದು ಈ ಜಿಲ್ಲೆ
ಯನ್ನು ಸೇರುತ್ತದೆ. ಈ ಜಿಲ್ಲೆಯ ಜಮಖಂಡಿ ತಾಲೂಕಿನ ಮಧ್ಯ
ದೊಳಗಿಂದ ಬೀಳಗಿಪೇಠಾ, ಬಾಗಿಲುಕೋಟೆ, ಹುನಗುಂದ ತಾಲೂಕು
ಗಳ ಉತ್ತರ ಮೇರೆಯಾಗಿಯೂ ವಿಜಾಪುರ, ಬಾಗೇವಾಡಿ, ಮುದ್ದೇ
ಬಿಹಾಳ ತಾಲೂಕುಗಳ ದಕ್ಷಿಣ ಮೇರೆಯಾಗಿಯೂ ಹರಿದು ರಾಯ
ಚೂರ ಜಿಲ್ಲೆ ಸೇರುತ್ತದೆ. ವಿಜಾಪುರ ಜಿಲ್ಲೆಯಲ್ಲಿ ಹರಿಯುವ ಎಲ್ಲ
ನದಿಗಳಲ್ಲಿ ಇದೇ ಎಲ್ಲಕ್ಕೂ ದೊಡ್ಡದು ಈ ನದಿಗೆ ಪೂರವ
ಬಂದಾಗ ನದಿಯ ಪಾತ್ರವು ಸುಮಾರು ಮೂರು ಮೈಲುಗಳಷ್ಟು
ಅಗಲವಾಗಿರುತ್ತದೆ. ಘಟಪ್ರಭಾ, ಮಲಪ್ರಭಾ ನದಿಗಳು ಇದರ
ದಕ್ಷಿಣದ ಶಾಖೆಗಳಾಗಿ ಇದೇ ಜಿಲ್ಲೆಯಲ್ಲಿ ಈ ನದಿಗೆ ಬಂದು ಕೂಡಿವೆ.
ಇದಕ್ಕೆ ಸಾಮಾನ್ಯ ಜನರು ಹಿರಿಹೊಳೆ ಎಂದು ಹೇಳುವರು. ಇದಕ್ಕೆ
ದಕ್ಷಿಣದ ಗಂಗೆ ಎಂದೂ ಹೆಸರು ಬಿದ್ದಿದೆ. ಅಂದರೆ ಅಷ್ಟು ಪವಿತ್ರ
ನದಿಯೆಂದು ಜನರ ಭಾವನೆ. ಶೀತಿಮನೆಯ ಹತ್ತರ ಈ ನದಿಗೆ
ರೈಲುದಾರಿಯ ಪೂಲು ಕಟ್ಟಿದ್ದು ಅದು ನೋಡಲಿಕ್ಕೆ ಭವ್ಯವಾಗಿದೆ.

**ಘಟಪ್ರಭಾ:—** ಇದು ಕೊಲ್ಹಾಪುರ ಜಿಲ್ಲೆಯಲ್ಲಿಯ ರಾವ
ಘಟ್ಟದಲ್ಲಿ ಹುಟ್ಟಿ ಕೊಲ್ಹಾಪುರ ಬೆಳಗಾವಿ ಜಿಲ್ಲೆಗಳೊಳಗಿಂದ ಬಂದು
ಈ ಜಿಲ್ಲೆಯಲ್ಲಿ ಮುಧೋಳ ತಾಲೂಕು, ಬೀಳಗಿ ಪೇಠಾ, ಬಾಗಿಲು
ಕೋಟೆ ತಾಲೂಕುಗಳಲ್ಲಿ ಹರಿದು ಮೂರಮಟ್ಟಿ ಎಂಬ ಊರ ಹತ್ತರ
ಕೃಷ್ಣಾ ನದಿಗೆ ಕೂಡುತ್ತದೆ.

**ಮಲಪ್ರಭಾ:—** ಈ ನದಿಯು ಬೆಳಗಾವಿ ಜಿಲ್ಲೆಯ ಖಾನಾ
ಪುರ ತಾಲೂಕಿನಲ್ಲಿ ಹುಟ್ಟಿ ಈ ಜಿಲ್ಲೆಯ ಬಾದಾಮಿ, ಹುನಗುಂದ
ತಾಲೂಕುಗಳಲ್ಲಿ ಹರಿದು ಸಂಗಮದ ಹತ್ತರ ಕೃಷ್ಣಾ ನದಿಗೆ ಕೂಡು
ತ್ತದೆ. ಸಂಗಮವು ಕ್ಷೇತ್ರಸ್ಥಳ. ಇಲ್ಲಿ ಬಸವೇಶ್ವರರು ಲಿಂಗೈಕ್ಯರಾದ
ರೆಂದು ಪ್ರಸಿದ್ಧಿಯಿದೆ. ಇಲ್ಲಿ ಬಸವೇಶ್ವರರ ಗುಡಿಯಿದೆ.



ಬಸವೇಶ್ವರರು

**ಹಳ್ಳಗಳು:**—ಈ ಜಿಲ್ಲೆಯಲ್ಲಿ ಹಲವು ಸಣ್ಣ ದೊಡ್ಡ ಹಳ್ಳಗಳಿದ್ದರೂ ಜಿಲ್ಲೆಯಲ್ಲಿ ಮಳೆ ಕಡಿಮೆಯಾಗುವದರಿಂದ ಯಾವಾಗಲೂ ನೀರು ಹರಿಯುವಂಥ ಹಳ್ಳಗಳು ತೀರ ಕಡಿಮೆ ಇರುವವು. ಡೋಣಿ ನದಿಯ ಉತ್ತರಭಾಗದಲ್ಲಿ ಹರಿದ ಹಳ್ಳಗಳು ಬಹಳ ಉದ್ದವಾಗಿ ಹರಿದಿರುತ್ತವೆ. ಆದರೆ ಅವುಗಳ ಉಪಯೋಗ ಕಡಿಮೆ. ಬಾದಾಮಿ ತಾಲೂಕಿನಲ್ಲಿ ಬಾದಾಮಿಯ ಹತ್ತರ ಬನಶಂಕರಿ ಗುಡಿಯ ಹಿಂಬದಿಯಲ್ಲಿ ಹರಿಯುವ ಸರಸ್ವತಿ ಹಳ್ಳವು ಮೂರುನಾಲ್ಕು

ಮೈಲು ಉದ್ದವಾಗಿ ಹರಿದಿದ್ದರೂ ಇಲ್ಲಿ ಯಾವಾಗಲೂ ನೀರು ಇರುತ್ತದೆ. ಇಷ್ಟೇ ಅಲ್ಲ, ಈ ಹಳ್ಳದಲ್ಲಿ ಮೊಸಳೆಗಳು ವಾಸಿಸುವಂಥ ಮಡುಗಳು ಇರುತ್ತವೆ. ಹುನಗುಂದ ತಾಲೂಕಿನಲ್ಲಿ ಇಳಕಲ್ಲ ಹತ್ತರ ಹರಿಯುವ ಹಳ್ಳಕ್ಕೆ ಅಲ್ಲಲ್ಲಿ ಕಾಲುವೆಗಳನ್ನು ತೆಗೆದು ಆ ನೀರನ್ನು ಭೂಮಿಗೆ ಉಣಿಸುತ್ತಾರೆ. ಇಳಕಲ್ಲದ ದಕ್ಷಿಣದಲ್ಲಿ ಉಪನಾಳ ಹತ್ತರ ಹಾಗು ಉತ್ತರದಲ್ಲಿ ತುರಮರಿಯ ಹತ್ತರ ಈ ಹಳ್ಳಕ್ಕೆ ಕಾಲುವೆಗಳನ್ನು ತೆಗೆದಿದ್ದಾರೆ.

**ಕೆರೆಗಳು:**—ಬೈಲುನಾಡಾದ ಈ ಜಿಲ್ಲೆಯಲ್ಲಿ ಕೆರೆಗಳು ಬಹಳೇ ಕಡಮೆ. ವಿಜಾಪುರ ತಾಲೂಕಿನಲ್ಲಿರುವ ಮಮದಾಪುರದ ಕೆರೆಯು ಈ ಜಿಲ್ಲೆಯಲ್ಲಿ ಎಲ್ಲಕ್ಕೂ ದೊಡ್ಡದು ಈ ಕೆರೆಯನ್ನು ವಿಜಾಪುರದ ಮಹಮೂದಶಹನು ಕಟ್ಟಿಸಿದನು. ಈ ಕೆರೆಯ ನೀರಿನಿಂದ ಕೆರೆಯ ದಕ್ಷಿಣಭಾಗದಲ್ಲಿ ಬತ್ತವನ್ನು ಬೆಳೆಯಲಾಗುತ್ತದೆ. ಬಾಗಿಲುಕೋಟೆ ತಾಲೂಕಿನಲ್ಲಿಯ ಮುಚಖಂಡಿ ಕೆರೆಯು ಎರಡನೆಯದು. ಈ ಕೆರೆಯಿಂದ ಬಾಗಿಲುಕೋಟೆಯ ವರೆಗೆ ಕಾಲುವೆ ತೆಗೆದಿದ್ದಾರೆ. ಇದರಿಂದ ಕಾಲುವೆಯ ದಂಡೆಯ ಪ್ರದೇಶವು ಫಲವತ್ತಾಗಿದೆ. ಇದಲ್ಲದೆ ಇಂಡಿ ತಾಲೂಕಿನಲ್ಲಿ ಸಂಗೋಗಿ ಕೆರೆ, ವಿಜಾಪುರ ತಾಲೂಕಿನಲ್ಲಿ ಕುಮಟಗಿ ಕೆರೆ, ಬಾಗಿಲುಕೋಟೆ ತಾಲೂಕಿನಲ್ಲಿ ಸಿರೂರಕೆರೆ ಇವು ತಕ್ಕಮಟ್ಟಿಗೆ ದೊಡ್ಡವು.

## ಅಭ್ಯಾಸ

1 ವಿಜಾಪುರ ಜಿಲ್ಲೆಯಲ್ಲಿ ಗುಡ್ಡದ ಪ್ರದೇಶವು ಯಾವ ಯಾವ ತಾಲೂಕುಗಳಲ್ಲಿ ಇರುತ್ತದೆ?

2 ಈ ಜಿಲ್ಲೆಯಲ್ಲಿ ಯಾವಯಾವ ಹೊಳೆಗಳು ಹರಿದಿರುವವು?

3 ಕೆಳಗೆ ಕೊಟ್ಟ ಊರುಗಳ ವಿಷಯದಲ್ಲಿ ಯಾವ-ಮಾತುಗಳು ನಿಮಗೆ ಗೊತ್ತಿವೆ ?

( 1 ) ಸಂಗಮ ....... ....

( 2 ) ಮಮದಾಪೂರ .... ..........

( 3 ) ಸೀತೀಮನೆ ........................

---

## ೩ ಸ್ವಾಭಾವಿಕ ವಿಭಾಗಗಳು.

ಗುಡ್ಡ, ಬೈಲು, ಮಳೆ ಬೆಳೆ ಹವೆಗಳ ಮೇಲಿಂದ ಬೇರೆ ಬೇರೆ ಪ್ರದೇಶಗಳಿಗೆ ಬೇರೆ ಬೇರೆ ಹೆಸರು ಕೊಡುತ್ತಾರೆ. ಯಾವ ಪ್ರದೇಶ ದಲ್ಲಿ ದೊಡ್ಡ ದೊಡ್ಡ ಗುಡ್ಡಗಳು ಇದ್ದು ಮಳೆಯು ಹೆಚ್ಚಿಗೆ ಆಗು ವದೋ ಅದಕ್ಕೆ "ಮಲನಾಡು" ಎಂದು ಹೇಳುತ್ತಾರೆ. ಯಾವ ಪ್ರದೇಶದಲ್ಲಿ ಗುಡ್ಡಗಳು ಹೆಚ್ಚಾಗಿ ಇರುವದಿಲ್ಲವೋ ಅದಕ್ಕೆ "ಬಯಲ-ನಾಡು" ಅಥವಾ ಬೆಳವಲು ಎಂದು ಹೇಳುತ್ತಾರೆ. ಮಳೆ ನಾಡು ಮತ್ತು ಬೆಳವಲ ಇವುಗಳ ನಡುವಿನ ಸೀಮೆಗೆ "ಗಡಿನಾಡು" ಎಂದು ಹೇಳುತ್ತಾರೆ. ವಿಜಾಪುರ ಜಿಲ್ಲೆಯು ಸಂಪೂರ್ಣವಾಗಿ ಬಯಲು ಸೀಮೆಯಾಗಿರುವದು; ಅಂದರೆ ಬೆಳವಲ ನಾಡಾಗಿರುವದು. ಈ ಬಯಲು ಸೀಮೆಯಲ್ಲಿ ಭೂಮಿಯು ಸಮನೆಲವುಳ್ಳದ್ದಾಗಿ ಇರು ತ್ತದೆ. ಇಲ್ಲವೆ ತೆರೆಗಳ ಹಾಗೆ ಏರಿಳಿತಗಳಿಂದ ಕೂಡಿದ್ದಿರುತ್ತದೆ. ಎತ್ತರ ಪ್ರದೇಶಗಳಲ್ಲಿ ಗರಸಿನ ಭೂಮಿ ಇರುತ್ತದೆ. ಸಮನೆಲದಲ್ಲಿ ಎರೆಭೂಮಿಯು ಇರುತ್ತದೆ. ಬಯಲಲ್ಲಿ ನಿಂತು ಸುತ್ತಮುತ್ತಲು ನೋಡುವವರಿಗೆ ತಲೆಯ ಮೇಲಿನ ಆಕಾಶವು ಡಬ್ಬು ಹಾಕಿದ ಕೊಪ್ಪ ರಿಗೆಯಂತೆ ಕಾಣುವದು. ಎರೆಇದ್ದಲ್ಲಿ ಹತ್ತಿ, ಜೋಳ, ಗೋದಿಗಳೂ

# ವಿಜಾಪುರ ಜಿಲ್ಲೆ

## ಸ್ವಾಭಾವಿಕ ವಿಭಾಗಗಳು

ಜನದಟ್ಟಣೆ-

೧೫೦ ರಿಂದ ೧೭೫

೧೭೫ ರಿಂದ ೨೦೦

೨೦೦ ರಿಂದ ೩೦೦

ಭೀಮಾ ನದಿ

ಇಂಡಿ

ಸಿಂದಗಿ

ವಿಜಾಪುರ

ಬಾಗೇವಾಡಿ

ಜಮಖಂಡಿ

ಕೃಷ್ಣಾ ನದಿ

ಬೀಳಗಿ

ಮುಧೋಳ

ಮುದ್ದೇಬಿಹಾಳ

ಬಾಗಲಕೋಟೆ

ಹುನಗುಂದ

ಬಾದಾಮಿ

ಪ್ರಮಾಣ- ೧=೩೦ ಮೈಲುಗಳು

ಮರಡಿಯ ಭೂಮಿಯಲ್ಲಿ ಸೆಜ್ಜೆ, ಜೋಳ, ಮಡಿಕೆ ಮೊದಲಾದವೂ ಬೆಳೆಯುವವು. ಇಲ್ಲಿ ಮಳೆ ಕಡಿಮೆ, ಬಿಸಿಲು ಹೆಚ್ಚು. ಬೇಸಿಗೆಯ ಬಿಸಿಲಂತೂ ಸೆನಿಸಿಕೊಳ್ಳುವಂಥದಿರುತ್ತದೆ. ಗಿಡಗಂಟಿಗಳು ಕಡಿಮೆ. ಅಲ್ಲಿಗೊಂದು ಇಲ್ಲಿಗೊಂದು ಮರಗಳು ಇರುತ್ತವೆ. ಜಾಲಿ, ಬೇವು, ಆರಳೆ ಇವೇ ಇಲ್ಲಿಯ ಮರಗಳು. ಇಲ್ಲಿಯ ಮನೆಯ ಗೋಡೆಗಳು ಕಲ್ಲಿನವು ಇರುತ್ತವೆ ಮಾಳಿಗೆಗೆ ಮೇಲುಮುದ್ದೆ ಹಾಕಿರುತ್ತಾರೆ. ಎಲ್ಲಿಯೋ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಶ್ರೀಮಂತರು ಹಂಚು ಹೊಚ್ಚಿದ ಮನೆಗಳನ್ನು ಚಂದಕ್ಕಾಗಿ ಕಟ್ಟಿಸುತ್ತಾರೆ. ಮೇಲುಮುದ್ದೆಯ ಮನೆಗಳು ಬಿಸಿಲು ದಿವಸಗಳಲ್ಲಿ ತಂಪಾಗಿ ಇರುವವು. ಆದ್ದರಿಂದಲೇ ಇಲ್ಲಿ ಮೇಲುಮುದ್ದೆಯ ಮನೆಗಳನ್ನು ಕಟ್ಟುತ್ತಾರೆ. ಈ ಬಯಲು ಸೀಮೆಯಲ್ಲಿ ನೀರಿನ ಅಬರು ಹೆಚ್ಚಾಗಿ ಇರುತ್ತದೆ. ಆದ್ದರಿಂದ ಜನರು ನದಿ ಹಳ್ಳಗಳ ದಂಡೆಗುಂಟ ವಾಸಿಸುವರು. ಅಂಥಲ್ಲಿ ಊರುಗಳು ಸಮೀಪ ಸಮೀಪ ಇರುವವು. ಉಳಿದ ಕಡೆಗೆ ದೂರ ದೂರ ಇರುವವು. ಇಷ್ಟೆಲ್ಲ ತೊಂದರೆ ಇದ್ದರೂ ಈ ಭಾಗದ ಹವೆಯು ಆರೋಗ್ಯಕಾರಕ ಇರುವದು. ಆದ್ದರಿಂದ ಜನರು ಧಷ್ಟ ಪುಷ್ಟರಾಗಿ ಇರುತ್ತಾರೆ. ಇಲ್ಲಿಯ ಗಂಡಸರು ದೋತರ ಉಡುವರು. ಮೈಯಲ್ಲಿ ಪೈರಣಹಾಕುವರು. ತಲೆಗೆ ರುಮಾಲು ಸುತ್ತುವರು. ಹೆಣ್ಣುಮಕ್ಕಳು ಸೀರೆ ಉಡುವರು, ಕುಪ್ಪಸ ತೊಡುವರು. ಒಕ್ಕಲುತನವೇ ಇಲ್ಲಿಯ ಮುಖ್ಯ ಉದ್ಯೋಗ. ಎರಡನೆಯದಾಗಿ ನೂಲುವದು, ನೇಯುವದು.

ಸಾಮಾನ್ಯವಾಗಿ ವಿಜಾಪುರ ಜಿಲ್ಲೆಯ ಎಲ್ಲ ಭಾಗವು ಬೆಳವಲ ನಾಡಾಗಿದ್ದರೂ ಇಲ್ಲಿಯ ಭೂಮಿಯ ರಚನೆ, ಜನವಸತಿ, ಜನರ ಸಾಂಪತ್ತಿಕ ಸ್ಥಿತಿ ಮೊದಲಾದವುಗಳನ್ನು ಲಕ್ಷಕ್ಕೆ ತಂದರೆ ಜಿಲ್ಲೆಯಲ್ಲಿ ಮೂರು ಸ್ವಾಭಾವಿಕ ವಿಭಾಗಗಳನ್ನು ಮಾಡಬಹುದಾಗಿದೆ. 1 ಕೃಷ್ಣಾ

ನದಿಯ ದಕ್ಷಿಣದ ಪ್ರದೇಶ, 2 ಕೃಷ್ಣಾ-ಡೋಣಿ ಇವುಗಳ ನಡುವಿನ ಪ್ರದೇಶ, 3 ಡೋಣಿ-ಭೀಮಾ ಇಗಳ ನಡುವಿನ ಪ್ರದೇಶ.

**ಕೃಷ್ಣಾನದಿಯ ದಕ್ಷಿಣದ ಪ್ರದೇಶ:**—ಇದು ಜಿಲ್ಲೆಯ ದಕ್ಷಿಣದಲ್ಲಿಯ ಭಾಗವಾಗಿದೆ. ಇದರಲ್ಲಿ ಹುನಗುಂದ, ಬಾದಾಮಿ, ಬಾಗಿಲುಕೋಟೆ, ಮುಧೋಳತಾಲೂಕುಗಳು, ಬೀಳಗಿ ಪೇರಾ ಮತ್ತು ಜಮುಖಂಡಿ ತಾಲೂಕಿನ ದಕ್ಷಿಣ ಭಾಗ ಇವಿಷ್ಟು ಬರುತ್ತವೆ. ವಿಜಾಪುರ ಜಿಲ್ಲೆಯಲ್ಲಿಯ ಗುಡ್ಡದ ಪ್ರದೇಶವು ಈ ಭಾಗದಲ್ಲಿ ಬರುತ್ತದೆ. ಕೃಷ್ಣಾ, ಘಟಪ್ರಭಾ, ಮಲಪ್ರಭಾ ಈ ಮೂರು ನದಿಗಳು ಇಲ್ಲಿ ಹರಿಯುತ್ತವೆ. ಈ ನದಿಗಳ ದಂಡೆಯು ಬೆಳೆಯುಳ್ಳ ಪ್ರದೇಶವು ಈ ಭಾಗದಲ್ಲಿ ಬರುತ್ತದೆ. ಈ ಭಾಗದಲ್ಲಿ ಕೆಂಪು ಮಸಾರಿಯ ಭೂಮಿಯು ಹೆಚ್ಚಿಗೆ ಇರುತ್ತದೆ. ಇಲ್ಲಿ ಜಿಲ್ಲೆಯ ಉಳಿದ ಭಾಗದ ಮಾನದಿಂದ ಮಳೆಯೂ ಹೆಚ್ಚಿಗೆ ಆಗುತ್ತದೆ. ಆದ್ದರಿಂದ ಇಲ್ಲಿ ಹರಿಯುವ ಹಳ್ಳಗಳಿಗೂ ಕಟ್ಟಿದ ಕೆರೆಗಳಿಗೂ ನೀರಿನ ಆಸರು ಇರುತ್ತದೆ. ಈ ಕಾರಣಗಳಿಂದ ಜಿಲ್ಲೆಯ ಉಳಿದ ಭಾಗಕ್ಕಿಂತ ಬೆಳೆಯು ಚೆನ್ನಾಗಿ ಬರುತ್ತದೆ. ಹತ್ತಿ, ಜೋಳ, ಸೆಜ್ಜೆ, ಸೇಂಗಾ ಇವು ಈ ಭಾಗದ ಬೆಳೆಗಳು. ಈ ಭಾಗದಲ್ಲಿ ಜನವಸತಿಯು ಉಳಿದ ಕಡೆಗಿಂತ ದಟ್ಟಾಗಿ ಇರುತ್ತದೆ. ವಿಜಾಪುರ ಜಿಲ್ಲೆಯಲ್ಲಿರುವ ದೊಡ್ಡ ಊರುಗಳಲ್ಲಿ ಹೆಚ್ಚು ಊರುಗಳು ಈ ಭಾಗದಲ್ಲಿ ಇರುತ್ತವೆ. ಜಿಲ್ಲೆಯಲ್ಲಿಯ ೨೦ ಸಾವಿರಕ್ಕಿಂತ ಹೆಚ್ಚಿಗೆ ಜನವಸತಿಯುಳ್ಳ ಬಾಗಿಲುಕೋಟೆ, ಜಮಖಂಡಿ, ಗುಳೇದಗುಡ್ಡ, ಇಳಕಲ್ಲ ಈ ನಾಲ್ಕೂ ಪಟ್ಟಣಗಳು ಈ ಭಾಗದಲ್ಲಿಯೇ ಇರುತ್ತವೆ. ಜಿಲ್ಲೆಯ ಉಳಿದ ಭಾಗಕ್ಕಿಂತ ಈ ಭಾಗದ ಜನರು ಸುಖಿಗಳಾಗಿದ್ದಾರೆ.

**ಕೃಷ್ಣಾ-ಡೋಣಿ ಇವುಗಳ ನಡುವಿನ ಪ್ರದೇಶ:**—ಇದು ಕೃಷ್ಣೆಯ ಉತ್ತರ ದಂಡೆಯಿಂದ ಡೋಣಿಯ ಆಚೆಗೆ 2-3 ಮೈಲು

ಗಳಷ್ಟು ವ್ಯಾಪಿಸಿದೆ. ಇದು ಜಿಲ್ಲೆಯ ಮಧ್ಯಭಾಗವು. ಮುದ್ದೇಬಿಹಾಳ-ಬಾಗೇವಾಡಿ ತಾಲೂಕುಗಳು, ವಿಜಾಪುರ ತಾಲೂಕಿನ ದಕ್ಷಿಣಭಾಗ, ಜಮುಖಂಡಿ ತಾಲೂಕಿನ ಉತ್ತರ ಭಾಗ ಇಷ್ಟು ಪ್ರದೇಶವು ಈ ಭಾಗದಲ್ಲಿ ಬರುತ್ತದೆ. ಈ ಪ್ರದೇಶವು ಮಧ್ಯದಲ್ಲಿ ಉಬ್ಬಾಗಿದ್ದು ಉತ್ತರಕ್ಕೂ ದಕ್ಷಿಣಕ್ಕೂ ಇಳುಕಲಾಗುತ್ತ ಹೋಗಿದೆ. ಈ ಭಾಗದಲ್ಲಿ ಎರೆಭೂಮಿಯು ಹೆಚ್ಚಾಗಿ ಇರುತ್ತದೆ. ಆದರೆ ಮಳೆ ಕಡಮೆಯಾಗುವದರಿಂದಲೂ ಸರಿಯಾಗಿ ಆಗದ ಇರುವದರಿಂದಲೂ ಮೇಲಿಂದ ಮೇಲೆ ಬರಕ್ಕೆ ತುತ್ತಾಗುತ್ತದೆ. ಮಳೆಯು ಸರಿಯಾಗಿ ಆದರೆ ಡೋಣಿಯ ಪ್ರದೇಶದಲ್ಲಿ ಬೆಳೆಯು ಚೆನ್ನಾಗಿ ಬರುತ್ತದೆ. ಈ ಭಾಗದ ಮುಖ್ಯ ಬೆಳೆಗಳೆಂದರೆ ಗೋದಿ, ಜೋಳ; ಹೊಳೆಯ ದಂಡೆಯನ್ನು ಬಿಟ್ಟರೆ ಮಧ್ಯದಲ್ಲಿ ನೀರಿನ ಆಸರು ಕಡಿಮೆ. ಕೃಷ್ಣಾನದಿಯ ದಕ್ಷಿಣಭಾಗಕ್ಕಿಂತ ಇಲ್ಲಿ ಜನವಸತಿ ಕಡಮೆ ಇರುವದು. ಜನರು ಅಲ್ಲಿಯಷ್ಟು ಸುಖವಾಗಿರುವದಿಲ್ಲ. ಮೇಲಿಂದ ಮೇಲೆ ಬರ ಬೀಳುವದರಿಂದ ಇಲ್ಲಿ ಬಡತನ ಹೆಚ್ಚು.

**ಡೋಣಿ-ಭೀಮಾ ಇವುಗಳ ನಡುವಿನ ಪ್ರದೇಶ:—** ಡೋಣಿಯ ಉತ್ತರಕ್ಕೆ ಪೂರ್ವ ಪಶ್ಚಿಮವಾಗಿ ಹಬ್ಬಿದ ಮರಡಿಯ ಸಾಲಿನಿಂದ ಭೀಮಾನದಿಯ ವರೆಗಿನ ಸೀಮೆಯು ಈ ಭಾಗದಲ್ಲಿ ಬರುತ್ತದೆ. ಇಂಡಿ–ಸಿಂದಗಿ ತಾಲೂಕುಗಳು, ವಿಜಾಪುರ ಜಿಲ್ಲೆಯ ಉತ್ತರಭಾಗ ಇವು ಈ ಪ್ರದೇಶದಲ್ಲಿ ಬರುತ್ತವೆ. ಈ ಪ್ರದೇಶವು ದಕ್ಷಿಣದಿಂದ ಉತ್ತರಕ್ಕೆ ಇಳುಕಲಾಗುತ್ತ ಹೋಗಿದೆ. ಇಲ್ಲಿಯ ಭೂಮಿಯು ತೆರೆಗಳಂತೆ ಏರಿಳಿತಗಳಿಂದ ಕೂಡಿದೆ. ದಿನ್ನೆಗಳೆಲ್ಲ ಹೆಚ್ಚಾಗಿ ಮರಡಿಯ ಸಾಲುಗಳಾಗಿರುವವು. ಈ ಭಾಗದಲ್ಲಿ ವಿಸ್ತಾರವಾದ ಕಲ್ಲಿನ ಹಾಸಿಗೆಗಳು ಅಲ್ಲಲ್ಲಿ ಕಾಣಸಿಗುತ್ತವೆ. ಇಲ್ಲಿಯ ಉಸುಕು ಕೂಡಿದ ಭೂಮಿಯು ಅಷ್ಟು ಕಸುವಿನದಲ್ಲ. ತಗ್ಗಿನ ಭೂಮಿಯಲ್ಲಿ

ಸರಿಯಾಗಿ ಮಳೆಯಾದಾಗ ಮಾತ್ರ ಅಲ್ಪ ಸ್ವಲ್ಪ ಬೆಳೆ ಬರುವದು. ಈ ಭಾಗದಲ್ಲಿ ಹರಿಯುವ ಹಳ್ಳಗಳೇನೋ ಉದ್ದವಾಗಿ ಹರಿದಿವೆ. ಆದರೆ ಮಳೆಯೇ ಕಡಿಮೆಯಾಗುವದರಿಂದ ಅವುಗಳಿಗೆ ನೀರಿನ ಆಸರು ಕಡಿಮೆ. ಭೀಮಾನದಿಯ ದಕ್ಷಿಣ ದಂಡೆಯ ಪ್ರದೇಶವು ಮಾತ್ರ ತಕ್ಕಮಟ್ಟಿಗೆ ಬೆಳೆಯುಳ್ಳ ಪ್ರದೇಶವಾಗಿದೆ. ಮಳೆಯು ಕಡಿಮೆಯಾಗುವದರಿಂದ ಈ ಭಾಗವು ಮೇಲಿಂದ ಮೇಲೆ ಬರಕ್ಕೆ ಈಡಾಗುತ್ತದೆ. ಇಲ್ಲಿ ಜನವಸತಿಯು ಬಹಳೇ ಕಡಿಮೆ ಇರುವದು. ಹೇಳಿ ಕೊಳ್ಳುವಂಥ ದೊಡ್ಡ ಪಟ್ಟಣಗಳಾಗಲಿ ಕೈಗಾರಿಕೆಗಳಾಗಲಿ ಇರುವದಿಲ್ಲ. ಜೋಳವು ಈ ಭಾಗದ ಮುಖ್ಯ ಬೆಳೆಯು.

## ಅಭ್ಯಾಸ

1 ) ವಿಜಾಪುರ ಜಿಲ್ಲೆಯಲ್ಲಿ ಹಂಚಿನ ಮನೆಗಳು ಯಾಕೆ ಇರುವದಿಲ್ಲ ?

2 ) ಜಿಲ್ಲೆಯ ಉತ್ತರಭಾಗದಲ್ಲಿ ಜನವಸತಿ ಕಡಿಮೆ ಯಾಕೆ ?

3 ) ದೊಡ್ಡ ದೊಡ್ಡ ಪಟ್ಟಣಗಳು ಜಿಲ್ಲೆಯ ಯಾವ ಭಾಗದಲ್ಲಿ ಹೆಚ್ಚಾಗಿ ಇರುತ್ತವೆ ?

4 ) ಬೆಳವಲನಾಡಿನ ಜನರ ಉಡುಪು ತೊಡವು, ಉದ್ಯೋಗ ಇವುಗಳನ್ನು ಬರೆಯಿರಿ.

# 4 ಉದ್ಯೋಗ, ಕೈಗಾರಿಕೆಗಳು ಮತ್ತು ಕಾರಖಾನೆಗಳು.

ಪ್ರತಿಯೊಬ್ಬನಿಗೂ ಅನ್ನಬೇಕು, ಬಟ್ಟೆ ಬೇಕು, ಇರಲಿಕ್ಕೆ ಮನೆ ಬೇಕು. ಪ್ರತಿಯೊಬ್ಬನೂ ಇವನ್ನು ದೊರಕಿಸಿಕೊಳ್ಳುವದಕ್ಕಾಗಿ ಯಾವದೊಂದು ಬಗೆಯಾಗಿ ದುಡಿಯಬೇಕಾಗುತ್ತದೆ. ಈ ದುಡಿತವೇ ಅವನ ಉದ್ಯೋಗವಾಗುತ್ತದೆ. ವಿಜಾಪುರ ಜಿಲ್ಲೆಯಲ್ಲಿಯ ಬಹಳಷ್ಟು ಜನರು ಒಕ್ಕಲುತನದ ಮೇಲೆಯೇ ಜೀವಿಸುತ್ತಾರೆ. ೧೦೦ರಲ್ಲಿ ೭೫ ಕ್ಕಿಂತ ಹೆಚ್ಚು ಜನರ ಉದ್ಯೋಗವು ಒಕ್ಕಲುತನವಾಗಿದೆ. ಈ ಜನರಿಗೆ ಸಹಾಯಕವಾಗುವಂಥ ಬಡಿಗತನ, ಕಮ್ಮಾರಿಕೆ, ನಮಗಾರಿಕೆ, ಸಿಂಪಿಗತನ, ಗೋಡೆ ಕಟ್ಟುವಿಕೆ ಮೊದಲಾದ ಉದ್ಯೋಗಗಳನ್ನು ಮಾಡಿಕೊಂಡು ಜೀವಿಸುವ ಜನರು ಸಾಮಾನ್ಯವಾಗಿ ಎಲ್ಲ ಹಳ್ಳಿ ಪಟ್ಟಣಗಳಲ್ಲಿಯೂ ಇರುತ್ತಾರೆ.

ಒಕ್ಕಲುತನದಿಂದ ಮನುಷ್ಯನಿಗೆ ಅವಶ್ಯವಿರುವ ಧಾನ್ಯಗಳು ದೊರೆಯುವವಲ್ಲದೆ ಬಟ್ಟೆಗೆ ಬೇಕಾಗುವ ಹತ್ತಿಯೂ ದೊರೆಯುವದು. ಹತ್ತಿಯನ್ನು ಅರೆದು ಅರಳೆ ಮಾಡಿ, ನೂತು, ನೆಯ್ದು ಬಟ್ಟೆಗಳನ್ನು ಮಾಡುತ್ತಾರೆ. ಮುಂಚಿನ ಕಾಲದಲ್ಲಿ ಹತ್ತಿಯನ್ನು ಅರೆಯುವ ಕೆಲಸವನ್ನು ಹಳ್ಳಿಯ ಜನರೇ ಮಾಡುತ್ತಿದ್ದರು. ಈಗ ಈ ಕೆಲಸವು ಗಿರಣಿಗಳಲ್ಲಿ ನಡೆಯುತ್ತದೆ. ಈ ಜಿಲ್ಲೆಯಲ್ಲಿ ಬಾಗಿಲುಕೋಟೆ, ವಿಜಾಪುರಗಳಲ್ಲಿ ಹತ್ತಿಯನ್ನು ಅರೆಯುವ ಗಿರಣಿಗಳು ಇರುತ್ತವೆ. ಈ ಅರಳೆಯನ್ನು ಮುಂಬಯಿಗೆ ಕಳಿಸಿಕೊಡುವರು.

ಅರಳೆಯಿಂದ ರಾಟಿಯ ಮೇಲೆ ನೂಲು ತೆಗೆದು ಬಟ್ಟೆ ನೇಯುವ ಕೆಲಸವು ಮುಂಚಿನ ಕಾಲದಲ್ಲಿ ಈ ಜಿಲ್ಲೆಯ ಹಲವು

ಊರುಗಳಲ್ಲಿ ನಡೆಯುತ್ತಿತ್ತು. ಗಿರಣಿಯ ಬಟ್ಟೆಗಳು ಬಂದಂದಿನಿಂದ ಈ ಉದ್ಯೋಗವು ಮುಗ್ಗಿ ಹೋಗಿತ್ತು. ಮಹಾತ್ಮಾ ಗಾಂಧಿಯವರ ಚಳವಳಿಯ ಪರಿಣಾಮವಾಗಿ ಮತ್ತೆ ಈ ಹಳ್ಳಿಯ ಉದ್ಯೋಗಕ್ಕೆ ಕಳೆ ಬಂದಿದೆ. ಈ ಜಿಲ್ಲೆಯ ಕಲಾದಗಿಯಲ್ಲಿ ಖಾದಿಯ ಉತ್ಪಾದನೆ ಪ್ರಾರಂಭ ಮಾಡಿದ್ದು ಇದರಿಂದ ಹಲವು ಜನರಿಗೆ ಉದ್ಯೋಗ ದೊರೆಯುವಂತಾಗಿದೆ. ಗಿರಣಿಯ ನೂಲನ್ನು ಉಪಯೋಗಿಸಿ ಮಗ್ಗ ಗಳ ಮೇಲೆ ಬಟ್ಟೆ ನೇಯುವ ಉದ್ಯೋಗವು ಈ ಜಿಲ್ಲೆಯಲ್ಲಿಯ ಬಹುತರವಾಗಿ ಎಲ್ಲ ದೊಡ್ಡ ಊರುಗಳಲ್ಲಿಯೂ ಅವುಗಳ ಸುತ್ತು ಮುತ್ತಲಿನ ಹಳ್ಳಿಗಳಲ್ಲಿಯೂ ನಡೆಯುತ್ತದೆ. ಇಳಕಲ್ಲದ ಸೀರೆಗಳೂ ಗುಳೇದಗುಡ್ಡ, ಅಮೀನಗಡ ಊರುಗಳ ಖಣಗಳೂ ಪ್ರಸಿದ್ಧವಾ ಗಿವೆ. ರಬಕವಿ, ಬನಹಟ್ಟಿ, ಜಮಖಂಡಿ, ಮಹಾಲಿಂಗಪೂರ ಈ ಊರುಗಳಲ್ಲಿ ಸೀರೆಗಳು ದೊಡ್ಡ ಪ್ರಮಾಣದಿಂದ ತಯಾರಾ ಗುತ್ತವೆ. ಕೈಮಗ್ಗದ ಬಿಳಿ ಬಟ್ಟೆಗಳಂತೂ ಸಾಮಾನ್ಯವಾಗಿ ಎಲ್ಲ ಕಡೆಗೆ ಆಗುತ್ತವೆ.

ಹತ್ತಿಯಿಂದ ಬಟ್ಟೆಗಳನ್ನು ಮಾಡುವಂತೆ ಕುರಿಗಳ ಉಣ್ಣೆ ಯಿಂದ ಕಂಬಳಿಗಳನ್ನು ಮಾಡುತ್ತಾರೆ. ಈ ಜಿಲ್ಲೆಯ ದಕ್ಷಿಣಭಾಗ ದಲ್ಲಿಯ ಬೀಳಗಿಪೇಠಾ ಮತ್ತು ಬಾಗಿಲುಕೋಟೆ ತಾಲುಕುಗಳಲ್ಲಿ ಮರಡಿಯ ಭೂಮಿಯಿದ್ದು ತಕ್ಕಷ್ಟು ಪ್ರಮಾಣದಲ್ಲಿ ಮಳೆಯಾಗುವ ದರಿಂದ ಕುರಿಸಾಕುವದಕ್ಕೆ ಅನುಕೂಲವಿದೆ. ಆದ್ದರಿಂದ ಆ ಭಾಗದಲ್ಲಿ ಕಂಬಳಿಗಳು ಹೆಚ್ಚಾಗಿ ತಯಾರಾಗುತ್ತವೆ. ಬಾಗಿಲುಕೋಟೆ ಮತ್ತು ಕುಂದರಗಿಯ ಕಂಬಳಿಗಳು ಪ್ರಸಿದ್ಧ ಇರುತ್ತವೆ.

ಈ ಜಿಲ್ಲೆಯ ಭೂಮಿಯಲ್ಲಿ ಹಲವು ಬಗೆಯ ಕಲ್ಲುಗಳುದೊರೆ ಯುವದರಿಂದ ಅವುಗಳಿಂದಾಗುವ ಕೆಲವು ಕೈಗಾರಿಕೆಗಳು ಜಿಲ್ಲೆಯಲ್ಲಿ

ನಡೆಯುತ್ತವೆ. ತಾಳೀಕೋಟಿ, ಗುಳೇದಗುಡ್ಡ ಈ ಊರುಗಳ ಹತ್ತಿರ ದೊರೆಯುವ ಕಲ್ಲಿನಿಂದ ಬೀಸುವಕಲ್ಲುಗಳನ್ನು ಮಾಡುತ್ತಾರೆ. ಬಾಗಿಲುಕೋಟೆ ತಾಲೂಕಿನಲ್ಲಿಯ ಸೆಲ್ಲೀಕೇರಿ ಊರ ಬಳಿ ದೊರೆಯುವ ಕಲ್ಲಿನಿಂದ ಮೂರ್ತಿಗಳನ್ನು ತಯಾರಿಸುತ್ತಾರೆ. ಬಾಗಿಲುಕೋಟೆ ತಾಲೂಕಿನಲ್ಲಿ ಪಾಟಿಯ ಕಲ್ಲುಗಳು ದೊರೆಯುವದರಿಂದ ಬಾಗಿಲು ಕೋಟೆಯಲ್ಲಿ ಪಾಟಿ ( ಕರಿಹಲಗೆ ) ತಯಾರಿಸುವ ಕಾರಖಾನೆ ಇರುತ್ತವೆ. ಇದೇ ಊರಲ್ಲಿ ನೆರೆಯ ಪ್ರದೇಶಗಳಲ್ಲಿ ದೊರೆಯುವ ಕಲ್ಲಿನಿಂದ ಸಿಮೆಂಟು ತಯಾರಿಸುವ ಕಾರಖಾನೆಗಳನ್ನು ತೆಗೆದಿದ್ದಾರೆ. ಹುನಗುಂದ ತಾಲೂಕಿನಲ್ಲಿರುವ ಗುಡೂರಿನಲ್ಲಿ ಕಾಜಿನ ಬಳೆಗಳು ತಯಾರಾಗುತ್ತವೆ. ವಿಜಾಪುರ ಬಾಗಿಲುಕೋಟೆಗಳಲ್ಲಿ ನೆಲಗಡಲೆಯಿಂದ ( ಸೇಂಗಾ ) ಎಣ್ಣೆ ತೆಗೆಯುವ ಗಿರಣಿಗಳು ಇರುತ್ತವೆ.

## ಅಭ್ಯಾಸ

1 ಕೆಳಗೆ ಕೆಲವು ಊರುಗಳನ್ನೂ ಆ ಊರುಗಳಲ್ಲಿ ನಡೆಯುವ ಉದ್ಯೋಗಗಳನ್ನೂ ಕೊಟ್ಟಿದೆ. ಅವುಗಳನ್ನು ಹೊಂದಿಸಿ ಬರೆಯಿರಿ.

| ಊರುಗಳು | ಉದ್ಯೋಗ |
|---|---|
| 1 ಗುಡೂರು | 1 ಕಂಬಳಿ |
| 2 ಬಾಗಿಲುಕೋಟೆ | 2 ಬೀಸುವ ಕಲ್ಲು |
| 3 ಕುಂದರಗಿ | 3 ಕಾಜಿನ ಬಳೆ |
| 4 ತಾಳೀಕೋಟೆ | 4 ಸಿಮೆಂಟಿನ ಕಾರಖಾನೆ |

# 5 ಮಾರ್ಗಗಳು

ವ್ಯಾಪಾರ ಉದ್ಯೋಗಗಳ ಬೆಳವಣಿಗೆಗೆ ಊರಿಂದ ಊರಿಗೆ ಹೋಗಲಿಕ್ಕೆ ದಾರಿಗಳು ಇರಬೇಕಾಗುತ್ತದೆ. ಹೀಗೆ ದಾರಿಗಳು ಇದ್ದರೆಯೇ ಜನರು ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಲಿಕ್ಕೂ ಸಾಮಾನುಗಳನ್ನು ಸಾಗಿಸಲಿಕ್ಕೂ ಅನುಕೂಲವಾಗುವದು. ಆ ಆ ಪ್ರದೇಶಗಳಲ್ಲಿರುವ ದೊಡ್ಡ ದೊಡ್ಡ ಊರುಗಳನ್ನು ಜೋಡಿಸುವಂತೆ ಒಳ್ಳೆಯ ದಾರಿಗಳನ್ನು ಅವಶ್ಯವಾಗಿ ಮಾಡಬೇಕಾಗುವದು. ಇದಕ್ಕೆ ಅನುಸರಿಯೇ ಈ ಜಿಲ್ಲೆಯಲ್ಲಿ ಮಾರ್ಗಗಳು ಇರುವವು.

**ಉಗಿಬಂಡಿಯ ದಾರಿ ( ರೇಲ್ವೆ ) :—** ಪರದೇಶಗಳಿಂದ ನಮ್ಮಲ್ಲಿ ಹಲವು ವಸ್ತುಗಳು ಬರುತ್ತವೆ. ಚಿಮಣಿಯ ಎಣ್ಣೆ, ಕಾಗದ, ಔಷಧಗಳು, ಯಂತ್ರ ಮೊದಲಾದವುಗಳು ಪರದೇಶಗಳಿಂದಲೇ ಬರುತ್ತವೆ. ಪರದೇಶಗಳಿಂದ ನಮ್ಮಲ್ಲಿ ಬರುವ ವಸ್ತುಗಳು ಮೊದಲು ಹಡಗುಗಳಿಂದ ಮುಂಬಯಿಗೆ ಬಂದು ಅಲ್ಲಿಂದ ನಮ್ಮಲ್ಲಿ ಬರುತ್ತವೆ. ಅದರಂತೆ ನಮ್ಮಲ್ಲಿಂದ ಪರದೇಶಕ್ಕೆ ಹೋಗುವ ವಸ್ತುಗಳು ಮುಂಬಯಿಗೆ ಹೋಗಿ ಅಲ್ಲಿಂದ ಪರದೇಶಗಳಿಗೆ ಹೋಗುತ್ತವೆ. ಆದ್ದರಿಂದ ಅದರಕೂಡ ನಮ್ಮ ಬಳಕೆಯು ಹೆಚ್ಚಿಗೆ ಬರುವದು. ಇದಕ್ಕಾಗಿ ಮುಂಬಯಿಯನ್ನು ನಮ್ಮ ಭಾಗಕ್ಕೆ ಜೋಡಿಸುವಂಥ ದಾರಿಗಳು ಅವಶ್ಯವಾಗಿ ಇರಬೇಕಾಗುತ್ತದೆ. ನಮ್ಮ ವಿಜಾಪುರ ಜಿಲ್ಲೆಯ ಉತ್ತರದಲ್ಲಿರುವ ಸೊಲ್ಲಾಪುರ ಜಿಲ್ಲೆಯಲ್ಲಿ ಸೊಲ್ಲಾಪುರ ಎಂಬ ದೊಡ್ಡ ಪಟ್ಟಣ ಇರುತ್ತದೆ. ಅಲ್ಲಿಂದ ಪುಣೆ ಮುಂಬಯಿಗಳಿಗೆ ಹೋಗಲು ಉಗಿಬಂಡಿಯ ದಾರಿಯು ಇರುತ್ತದೆ. ವಿಜಾಪುರ ಜಿಲ್ಲೆಯ ದಕ್ಷಿಣದಲ್ಲಿ ಇರುವ ಧಾರವಾಡ ಜಿಲ್ಲೆಯಲ್ಲಿ ಹುಬ್ಬಳ್ಳಿ ಎಂಬ ದೊಡ್ಡ ಪಟ್ಟಣ ಇರುತ್ತದೆ. ಇಲ್ಲಿಂದಲೂ ಪುಣೆ ಮುಂಬಯಿಗಳಿಗೆ

ಉಗಿಬಂಡಿಯ ದಾರಿಯು ಇರುತ್ತದೆ. ಇವೆರಡು ಪಟ್ಟಣಗಳು ರೇಲ್ವೆ ಜಂಕ್ಶನ್ ಇರುತ್ತವೆ. ಒಂದು ಸ್ಟೇಶನದಿಂದ ಎರಡು ಮೂರು ದಿಕ್ಕಿನಲ್ಲಿ ಉಗಿಬಂಡಿಯ ದಾರಿಗಳು ಒಡೆಯುತ್ತಿದ್ದರೆ ಅದಕ್ಕೆ ರೇಲ್ವೆ ಜಂಕ್ಶನ್ ಅನ್ನುವರು. ಈ ಎರಡೂ ಪಟ್ಟಣಗಳನ್ನು ಕೂಡಿಸುವಂತೆ ಒಂದು ಉಗಿಬಂಡಿಯ ದಾರಿಯು ಹುಬ್ಬಳ್ಳಿಯಿಂದ ಹೊರಟು ಗದುಗಿನ ಮೇಲಿಂದ ಜಿಲ್ಲೆಯಲ್ಲಿ ಮಧ್ಯವರ್ತಿಯಾಗುವಂತೆ ನಾಗಿ ಹುಟಗಿಯ ಮೇಲಿಂದ ಸೊಲ್ಲಾಪುರಕ್ಕೆ ಹೋಗಿ ಕೂಡಿದೆ. ಇದಕ್ಕೆ **ಹುಬ್ಬಳ್ಳಿ-ಸೊಲಾಪುರ-ಮಾರ್ಗ** ಎಂದು ಹೇಳುತ್ತಾರೆ. ಇದು ದಕ್ಷಿಣ ರೇಲ್ವೆಯ ಒಂದು ಭಾಗವಾಗಿದೆ ಈ ದಾರಿಯು ನಮ್ಮ ವಿಜಾಪುರ ಜಿಲ್ಲೆಯಲ್ಲಿ **120** ಮೈಲುಗಳಷ್ಟು ಉದ್ದವಾಗಿದೆ. ಈ ದಾರಿಯ ಮೇಲೆ ನಮ್ಮ ಜಿಲ್ಲೆಯ ಪ್ರವಾಸಿಕರಿಗೆ ಅನುಕೂಲವಾಗುವಂತೆ **ಸ್ಟೇಶನುಗಳು** ಇರುತ್ತವೆ. ಸ್ಟೇಶನುಗಳು ಅಂದರೆ ಉಗಿಬಂಡಿ ನಿಲ್ಲುವ ಸ್ಥಳ.

ಈ ದಾರಿಯ ಮೇಲೆ ನಮ್ಮ ಜಿಲ್ಲೆಯಲ್ಲಿ ಇರುವ ಸ್ಟೇಶನುಗಳು:— ಬಾದಾಮಿ, ಗುಳೇದಗುಡ್ಡ, ಬಾಗಿಲುಕೋಟೆ, ಕಡ್ಲಿಮಟ್ಟಿ, ಸೀತೆಯಮನೆ, ಆಲಮಟ್ಟಿ, ತೇಲಗಿ, ಮುಳವಾಡ, ಜುಮ್ಮನಾಳ, ವಿಜಾಪುರ, ಮಿಂಚಿನಾಳ, ನಿಂಬಾಳ, ಇಂಡಿರೋಡ, ಲಚ್ಯಾಣ.

**ಲೈನದಾರಿಗಳು:**—ಉಗಿಬಂಡಿಯ ದಾರಿಯು ಇಲ್ಲದಾಗ ದೂರ ದೂರದ ವ್ಯಾಪಾರ ವ್ಯವಹಾರವು ಸಹ ಚಕ್ಕಡಿಗಳಿಂದಲೇ ನಡೆಯುತ್ತಿತ್ತು. ಇದಲ್ಲದೆ ಎಲ್ಲ ದೊಡ್ಡ ಪಟ್ಟಣಗಳಿಗೂ ಉಗಿಬಂಡಿಯ ದಾರಿಯನ್ನು ಮಾಡುವದೆಂದರೆ ಬಹಳ ವೆಚ್ಚದ ಮಾತು. ಅದು ಸಾಧ್ಯವಿಲ್ಲ. ಆದ್ದರಿಂದ ಜಿಲ್ಲೆಯಲ್ಲಿಯ ದೊಡ್ಡ ದೊಡ್ಡ ಪಟ್ಟಣಗಳನ್ನೂ ನೆರೆನಾಡಿನಲ್ಲಿಯ ದೊಡ್ಡ ದೊಡ್ಡ ಪಟ್ಟಣಗಳನ್ನೂ ಜೋಡಿಸುವಂತೆ ಲೈನದಾರಿಗಳನ್ನು ಮಾಡಬೇಕಾಗುತ್ತದೆ. ಈ ಜಿಲ್ಲೆಯಲ್ಲಿ ಇಂತಹ ಮೂರು ಮುಖ್ಯ ಮಾರ್ಗಗಳಿರುತ್ತವೆ.

**1 ರತ್ನಾಗಿರಿ-ಕೊಲ್ಲಾಪುರ-ಮಿರಜಿ-ವಿಜಾಪುರ- ಹೈದರಾಬಾದ ಮಾರ್ಗ:**—ಇದು ಈ ಜಿಲ್ಹೆಯಲ್ಲಿರುವ ಪೂರ್ವ ಪಶ್ಚಿಮವಾದ ಮುಖ್ಯದಾರಿಗಳಲ್ಲಿ ಒಂದು. ಇದು ಪಶ್ಚಿಮ ಸಮುದ್ರದ ದಂಡೆಯಲ್ಲಿರುವ ರತ್ನಾಗಿರಿಯಿಂದ ಸಾಂಗಲಿ ಮಿರಜಿಗಳ ಮೇಲಿಂದ ಬಂದು ಈ ಜಿಲ್ಲೆಯ ಹೊನವಾಡ, ತಿಕೋಟಾ, ವಿಜಾಪುರ, ಹಿಪ್ಪರಗಿ, ಸಿಂದಗಿ ಯಂಕಂಚಿಗಳ ಮೇಲಿಂದ ಹೈದಾರಬಾದಕ್ಕೆ ಹೋಗಿದೆ.

**2 ವೆಂಗುರ್ಲಾ-ಬೆಳಗಾವ--ಬಾಗಲಕೋಟೆ ಮುದಗಲ್ಲ ಮಾರ್ಗ:**—ಇದು ಪೂರ್ವಪಶ್ಚಿಮವಾಗಿರುವ ಇನ್ನೊಂದು ದೊಡ್ಡ ಮಾರ್ಗವು. ಇದು ವೆಂಗುರ್ಲಾ, ಬೆಳಗಾವಿಗಳ ಮೇಲಿಂದ ಬಂದು ಈ ಜಿಲ್ಲೆಯ ಲೋಕಾಪುರ, ಕಲಾದಗಿ, ಬಾಗಿಲುಕೋಟೆ, ಕಮತಗಿ, ಅಮೀನಗಡ, ಹುನಗುಂದಗಳ ಮೇಲಿಂದ ಮುದಗಲ್ಲಿಗೆ ಹೋಗಿದೆ.

**3 ಹುಬ್ಬಳ್ಳಿ-ಸೊಲ್ಲಾಪುರ ಮಾರ್ಗ:**—ಇದು ಈ ಜಿಲ್ಲೆಯಲ್ಲಿಯ ದಕ್ಷಿಣೋತ್ತರ ಮುಖ್ಯಮಾರ್ಗವು. ಇದು ಹುಬ್ಬಳ್ಳಿಯಿಂದ ಹೊರಟು ಈ ಜಿಲ್ಲೆಯ ಕೆರೂರ, ಅನಗವಾಡಿ, ಕೊಲ್ಹಾರ, ವಿಜಾಪುರ, ಹೊರ್ತಿ, ಧೂಳಖೇಡಗಳ ಮೇಲಿಂದ ಸೊಲ್ಲಾಪುರಕ್ಕೆ ಹೋಗಿದೆ.

ಈ ಮೂರು ಮುಖ್ಯ ಮಾರ್ಗಗಳಲ್ಲದೆ ಜಿಲ್ಲೆಯಲ್ಲಿಯ ದೊಡ್ಡ ದೊಡ್ಡ ಊರುಗಳನ್ನು ನೆರೆ ನಾಡಿಗೆ ಕೂಡಿಸುವಂತೆ ಕೆಳಗಿನ ಲೈನ ದಾರಿಗಳು ಇರುತ್ತವೆ.

**1 ವಿಜಾಪುರ-ಜತ್ತಿ ದಾರಿ:**—ವಿಜಾಪುರದಿಂದ ಸಾಂಗಲಿಯ ಕಡೆಗೆ ಹೋಗುವ ದಾರಿಗುಂಟ ತಿಕೋಟಾ ವರೆಗೆ ಬಂದ ಮೇಲೆ ಅಲ್ಲಿಂದ ಬಾಬಾನಗರ, ಬಿಜ್ಜರಗಿ, ಕನಮಡಿ ಈ ಊರುಗಳ ಮೇಲಿಂದ ಒಂದು ದಾರಿಯು ಜತ್ತಿಯ ವರೆಗೆ ಹೋಗಿರುತ್ತದೆ.

2 **ದೇವನಗಾವಿ-ಪಂಢರಪುರ ದಾರಿ:**-ಈ ಜಿಲ್ಲೆಯ ಉತ್ತರ ಬದಿಯಲ್ಲಿ ಸಿಂದಗಿ ತಾಲೂಕಿನಲ್ಲಿ ಇರುವ ದೇವನಗಾವಿಯಿಂದ ಆಲಮೇಲ, ಇಂಡಿ, ಚಡಚಣಗಳ ಮೇಲಿಂದ ಒಂದು ದಾರಿಯು ಮಂಗಳವೇಢೆಗೆ, ಅಲ್ಲಿಂದ ಪಂಢರಪುರಕ್ಕೆ ಹೋಗಿದೆ.

3 **ಬೀಳಗಿ- ಕುಡಚಿ ದಾರಿ:**- ಹುಬ್ಬಳ್ಳಿ-ಸೊಲ್ಲಾಪುರ ದಾರಿಯ ಮೇಲೆ ಇರುವ ಬೀಳಗಿಯಿಂದ ಒಂದು ದಾರಿಯು ಜಮಖಂಡಿ, ರಬಕವಿ, ತೇರದಾಳಗಳ ಮೇಲಿಂದ ಬೆಳಗಾವಿ ಜಿಲ್ಲೆಯ ಪುಣೆ ಬೆಂಗಳೂರ ಉಗಿಬಂಡಿಯ ದಾರಿಯ ಮೇಲಿನ ಕುಡಚಿ ಸ್ಟೇಶನದ ವರೆಗೆ ಹೋಗಿದೆ.

4 **ಅನಗವಾಡಿ-ಚಿಕ್ಕೋಡಿರೋಡ ದಾರಿ:**—ಹುಬ್ಬಳ್ಳಿ-ಸೊಲ್ಲಾಪುರ ದಾರಿಯ ಮೇಲೆ ಬೀಳಗಿಯ ದಕ್ಷಿಣಕ್ಕೆ ಇರುವ ಅನಗವಾಡಿಯಿಂದ ಮುಧೋಳ, ಮಹಾಲಿಂಗಪೂರಗಳ ಮೇಲೆ ಹಾಯ್ದು ಒಂದು ದಾರಿಯು ಬೆಳಗಾವಿ ಜಿಲ್ಲೆಯಲ್ಲಿಯ ಪುಣೆ-ಬೆಂಗಳೂರ ಉಗಿಬಂಡಿಯ ದಾರಿಯ ಮೇಲೆ ಇರುವ ಚಿಕ್ಕೋಡಿರೋಡ ಸ್ಟೇಶನ ವರೆಗೆ ಹೋಗುತ್ತದೆ.

5 **ಬಾಗಿಲುಕೋಟೆ-ರಾಮದುರ್ಗ ದಾರಿ:**—ಈ ದಾರಿಯು ಬಾಗಿಲುಕೋಟೆಯಿಂದ ಸಿರೂರ, ಗುಳೇದಗುಡ್ಡ, ಬಾದಾಮಿಗಳ ಮೇಲಿಂದ ಬೆಳಗಾವಿ ಜಿಲ್ಲೆಯಲ್ಲಿಯ ರಾಮದುರ್ಗದ ವರೆಗೆ ಹೋಗಿದೆ. ಜಿಲ್ಲೆಯನ್ನು ನೆರೆನಾಡಿಗೆ ಜೋಡಿಸುವಂಥ ಮೇಲಿನ ದಾರಿಗಳಲ್ಲದೆ ಜಿಲ್ಲೆಯ ಸ್ಥಳವಾದ ವಿಜಾಪುರವನ್ನು ಜಿಲ್ಲೆಯಲ್ಲಿಯ ದೊಡ್ಡ ದೊಡ್ಡ ಊರುಗಳಿಗೆ ಜೋಡಿಸುವಂತೆ ಇನ್ನೂ ಕೆಲವು ಲೈನದಾರಿಗಳು ಇರುತ್ತವೆ.

### ಅಭ್ಯಾಸ

1 ಹುಬ್ಬಳ್ಳಿ-ಸೊಲ್ಲಾಪುರ ರೇಲ್ವೆಯ ಮೇಲೆ ವಿಜಾಪುರ ಜಿಲ್ಲೆಯಲ್ಲಿರುವ ದೊಡ್ಡ ಪಟ್ಟಣಗಳು ಯಾವವು ?

2 ಬಾಗಿಲುಕೋಟೆಯಿಂದ ವಿಜಾಪುರಕ್ಕೆ ರೈಲಿನಿಂದ ಹೋಗುವಾಗ ಹತ್ತುವ ಸ್ಟೇಶನಗಳು ಯಾವವು ?

3 ಬೆಳಗಾವಿ ಮುದಗಲ್ಲ ಲೈನದಾರಿಯ ಮೇಲೆ ಈ ಜಿಲ್ಲೆಯಲ್ಲಿ ಇರುವ ದೊಡ್ಡ ಊರುಗಳು ಯಾವವು ?

—

## 6 ಪಟ್ಟಣ ಮತ್ತು ಪೇಟೆಯ ಊರುಗಳು.

ಊರುಗಳಲ್ಲಿ ಹಳ್ಳಿ, ಪೇಟೆಯ ಊರು, ಪಟ್ಟಣ ಎಂದು ಮೂರು ಪ್ರಕಾರಗಳು ಸಾಮಾನ್ಯವಾಗಿ ಊರಿನ ಜನಸಂಖ್ಯೆಯ ಮೇಲಿಂದ ಈ ಪ್ರಕಾರಗಳನ್ನು ಮಾಡಲಾಗಿದೆ.

ಐದು ಸಾವಿರಕ್ಕಿಂತ ಕಡಿಮೆ ಜನರು ವಾಸಿಸುವ ಊರುಗಳಿಗೆ ಹಳ್ಳಿಗಳು ಎಂದು ಹೆಸರು. ತನ್ನ ಸುತ್ತಲಿನ ಹಳ್ಳಿಗಳಿಗೆ ಅವಶ್ಯವಿರುವ ವಸ್ತುಗಳನ್ನು ಪೂರಯಿಸಿ, ಆ ಹಳ್ಳಿಗಳ ವಸ್ತುಗಳನ್ನು ಕೊಂಡು ಸಾಗಿಸುವ ವ್ಯಾಪಾರದ ಸ್ಥಳಗಳಾದ ಐದು ಸಾವಿರಕ್ಕಿಂತ ಹೆಚ್ಚಿಗೆ ಜನಸಂಖ್ಯೆ ಇರುವ ದೊಡ್ಡ ಊರುಗಳಿಗೆ ಪೇಟೆಯ ಊರುಗಳು ಎಂದು ಹೇಳುತ್ತಾರೆ. ಇಪ್ಪತ್ತೈದು ಸಾವಿರಕ್ಕಿಂತಲೂ ಹೆಚ್ಚಿಗೆ ಜನರು ವಾಸಿಸುವ ದೊಡ್ಡ ಊರುಗಳು ಪಟ್ಟಣಗಳು.

ವಿಜಾಪುರ ಜಿಲ್ಲೆಯಲ್ಲಿ ವಿಜಾಪುರ, ಬಾಗಿಲುಕೋಟೆ, ಇವು ಎರಡು ಪಟ್ಟಣಗಳು. ಇರುತ್ತವೆ ಅಲ್ಲದೆ 27 ಪೇಟೆಯ್ಸು ಊರುಗಳು, 1225 ಹಳ್ಳಿಗಳು ಇರುತ್ತವೆ.

### ವಿಜಾಪುರ

ಇದು ಜಿಲ್ಲೆಯ ಮುಖ್ಯ ಸ್ಥಳವಾಗಿದ್ದು 66 ಸಾವಿರದಷ್ಟು ಜನರು ಈ ಪಟ್ಟಣದಲ್ಲಿ ವಾಸಿಸುತ್ತಾರೆ. ಇದು ಇತಿಹಾಸ ಪ್ರಸಿದ್ಧ ವಾದ ಹಳೆಯ ಪಟ್ಟಣವಾಗಿದೆ. ಇದು ಆದಿಲಶಾಹಿ ಮನೆತನದ ಮುಸಲ್ಮಾನ ಬಾದಶಹರ ರಾಜಧಾನಿಯಾದಮೇಲೆ ಬಹಳೇ ಬೆಳೆದು ದೊಡ್ಡ ಪಟ್ಟಣವಾಯಿತು ಈ ಬಾದಶಹರು ಊರ ಸುತ್ತಲು ಕೋಟೆ ಕಟ್ಟಿಸಿ ವ್ಯಾಪಾರಕ್ಕೆ ಆಶ್ರಯ ಕೊಟ್ಟರು. ಅವರು ಭವ್ಯ ವಾದ ಹಲವು ಕಟ್ಟಗಳನ್ನು ಕಟ್ಟಿಸಿದ್ದಾರೆ. ಆಗಿನಕಾಲದ ಕೋಟೆಯ ಗೋಡೆಯು ಈಗಲೂ ಇರುತ್ತದೆ. ಅಲ್ಲದೆ ನೋಡತಕ್ಕಂಥ ಹಲವು ಹಳೆಯ ಕಾಲದ ಕಟ್ಟಡಗಳು ಇರುತ್ತವೆ. ಈ ಕಟ್ಟಡಗಳನ್ನು ನೋಡುವದಕ್ಕಾಗಿಯೇ ದೇಶ ವಿದೇಶಗಳಿಂದ ಹಲವರು ಪ್ರವಾಸಿ ಕರು ಈ ಊರಿಗೆ ಬರುತ್ತಾರೆ.

ವಿಜಾಪುರದಲ್ಲಿ ನೋಡತಕ್ಕಂತಹ ಪುರಾತನ ಕಟ್ಟಡಗಳಲ್ಲಿ ಮೊದಲನೆಯದೆಂದರೆ ಗೋಳಗುಮಟವು. ವಿಜಾಪುರದಲ್ಲಿ ಆಳಿದ ಮಹಮೂದಶಹ ಎಂಬವನು ಈ ಗುಮ್ಮಟವನ್ನು ಕಟ್ಟಿಸಿದನು. ಈ ಕಟ್ಟಡದಲ್ಲಿಯ ಆಶ್ಚರ್ಯಕರ ಸಂಗತಿಯೆಂದರೆ ಕಟ್ಟಡದ ಮೇಲ್ಬ ದಿಯಲ್ಲಿ ಇರುವ ಗುಮ್ಮಟದ ಭಾಗದಲ್ಲಿ ಒಮ್ಮೆ ಉಚ್ಚರಿಸಿದ ಶಬ್ದವು ಹಲವು ಸಾರೆ ಪ್ರತಿಧ್ವನಿ ಮಾಡುತ್ತದೆ. ಅದಕ್ಕಾಗಿಯೇ ಇದಕ್ಕೆ ಬೋಲಗುಮ್ಮಟ ಅಂದರೆ ಮಾತನಾಡುವ ಗುಮ್ಮಟ ಎಂದು ಹೆಸರು ಬಿದ್ದಿದೆ. ಈ ಕಟ್ಟಡದಲ್ಲಿ ಮಹಮೂದಶಹನ ಹಾಗು ಅವನ




ವಿಜಾಪುರದ ಗೋಳಗುಮಟ.

ಹೆಂಡತಿ ಮಕ್ಕಳ ಗೋರಿಗಳು ಇರುತ್ತವೆ. ಸತ್ತವರ ಗೋರಿಗಳ ಮೇಲೆ ಗುಮಟಗಳನ್ನು ಕಟ್ಟುವದು ಮುಸಲ್ಮಾನರಲ್ಲಿಯ ಒಂದು ವಾಡಿಕೆಯಾಗಿದೆ. ವಿಜಾಪುರದಲ್ಲಿ ಜೋಡಗುಮಟ, ಇಬ್ರಾಹಿಮ ರೋಜಾ ಮೊದಲಾಗಿ ಇನ್ನೂ ಹಲವು ನೋಡತಕ್ಕಂಥ ಗುಮಟಗಳು ಇರುತ್ತವೆ ಇದಲ್ಲದೆ ಸಾತಮಜಲಿ ಅರಮನೆ, ಅಸಾರಮಹಾಲ, ಜುಮ್ಮಾಮಸೀದೆ ಮೊದಲಾದ ಹಳೆಯ ಕಟ್ಟಡಗಳೂ ಮಲಿಕ್-ಇ-ಮೈದಾನ ಎಂಬ ಹಳೆಯ ಕಾಲದ ದೊಡ್ಡ ತೋಫೂ ನೋಡತಕ್ಕಂತಹವು ಇರುತ್ತವೆ. ಇತ್ತೀಚೆಗೆ ಕಟ್ಟಿಸಿದ ಸಿದ್ಧೇಶ್ವರಗುಡಿ, ಲಕ್ಷ್ಮೀಗುಡಿ ಇವಾದರೂ ನೋಡತಕ್ಕಂತಹವು ಇರುತ್ತವೆ.

ಈ ಊರಲ್ಲಿಯ ಮುನಿಸಿಪಾಲಿಟಿಯು ಊರ ಸ್ವಚ್ಛತೆಯನ್ನು ಕಾಯ್ದುಕೊಳ್ಳುತ್ತದೆ. ಜಿಲ್ಲೆಯ ಹಾಗು ತಾಲೂಕಿನ ಮುಖ್ಯ ಸ್ಥಳವಾಗಿರುವದರಿಂದ ಎಲ್ಲ ಕಚೇರಿಗಳೂ ಈ ಊರಲ್ಲಿ ಇರುತ್ತವೆ. ಅಲ್ಲದೆ ಹಣದ ವ್ಯವಹಾರ ಮಾಡುವ ಹಲವು ಬ್ಯಾಂಕುಗಳೂ ಹಲವು ಪ್ರಾಥಮಿಕ ಶಾಲೆಗಳೂ ಇರುತ್ತವೆ. ಅಲ್ಲದೆ ಮಾಧ್ಯಮಿಕಶಿಕ್ಷಣ ಕೊಡುವ ಕೆಲವು ಹಾಯಸ್ಕೂಲುಗಳೂ ಪ್ರೌಢ ಶಿಕ್ಷಣ ಕೊಡುವ ವಿಜಯ ಕಾಲೇಜ ಎಂಬದೂ ಇಲ್ಲಿ ಇರುತ್ತವೆ.

ಇಲ್ಲಿಯ ಪೇಟೆಯಲ್ಲಿ ಕಿರಾಣಿ ಸಾಮಾನುಗಳ ವ್ಯಾಪಾರ ಹಾಗು ಕಾಳಿನ ವ್ಯಾಪಾರ ಚೆನ್ನಾಗಿ ನಡೆಯುತ್ತವೆ. ಈ ಊರಲ್ಲಿಯ ಸಿದ್ದೇಶ್ವರ ಜಾತ್ರೆಯು ಮಾಘಮಾಸದಲ್ಲಿ ಆಗುತ್ತದೆ. ಇದು ಜಿಲ್ಲೆಯಲ್ಲಿಯೇ ದೊಡ್ಡ ಜಾತ್ರೆ. ೫೦-೬೦ ಸಾವಿರಕ್ಕಿಂತಲೂ ಹೆಚ್ಚಿಗೆ ಜನರು ಈ ಜಾತ್ರೆಗೆ ಕೂಡುತ್ತಾರೆ. ಜಾತ್ರೆಯ ಸಮಯದಲ್ಲಿ ಒಕ್ಕಲುತನ ಪ್ರದರ್ಶನ, ದನಗಳ ಪ್ರದರ್ಶನ ಮೊದಲಾದವು ಆಗುತ್ತವೆ.

## ಬಾಗಿಲುಕೋಟೆ

ಈ ಊರು ಘಟಪ್ರಭಾನದಿಯ ದಂಡೆಯ ಮೇಲೆ ಇರುತ್ತದೆ. ವಿಜಾಪುರಜಿಲ್ಲೆಯಲ್ಲಿ ಇದು ೨ನೆಯ ದೊಡ್ಡ ಪಟ್ಟಣ. 32 ಸಾವಿರ ಜನರು ಈ ಊರಲ್ಲಿರುವರು. ಇದು ತಾಲೂಕಿನ ಸ್ಥಳವಾಗಿದೆ. ಈ ಭಾಗದಲ್ಲಿ ಇದೊಂದು ಔದ್ಯೋಗಿಕ ಪಟ್ಟಣವಾಗಿದೆ. ಹತ್ತಿಯನ್ನು ಅರೆದು ಗಂಟು ಕಟ್ಟುವ ಗಿರಣಿಗಳು, ಎಣ್ಣೆ ತೆಗಯುವ ಗಿರಣಿಗಳು, ಪಾಟಿಯ ಕಾರಖಾನೆಗಳು, ಸಿಮೆಂಟ ಕಾರಖಾನೆ ಹೀಗೆ ಬೇರೆ ಬೇರೆ ಬಗೆಯ ಕಾರಖಾನೆಗಳು ಇಲ್ಲಿ ಇರುತ್ತವೆ. ಕೈಮುಗ್ಗದ ಉದ್ಯೋಗವೂ ನಡೆಯುತ್ತದೆ. ಕಂಬಳಿಗಳ ವ್ಯಾಪಾರಕ್ಕೂ ಹೆಸರಾಗಿದೆ. ಇಲ್ಲಿ ಎರಡು ಹಾಯಸ್ಕೂಲುಗಳೂ ಒಂದು ಕಾಲೇಜೂ ಇರುತ್ತವೆ. ಈ ಊರಲ್ಲಿ ಮೋಟಗಿ ಬಸವಣ್ಣದೇವರ ದೊಡ್ಡ ಜಾತ್ರೆ ಆಗುತ್ತದೆ.

ವಿಜಾಪುರ ಜಿಲ್ಲೆಯಲ್ಲಿ ಮೇಲಿನ ಎರಡು ಪಟ್ಟಣಗಳಲ್ಲದೆ 20 ಸಾವಿರಕ್ಕಿಂತ ಹೆಚ್ಚು ಜನವಸತಿ ಇರುವ ಮೂರು ದೊಡ್ಡ ಊರುಗಳು ಇರುವವು. 1 ಗುಳೇದಗುಡ್ಡ 2 ಜಮಖಂಡಿ 3 ಇಳಕಲ್ಲ.

ಇದಲ್ಲದೆ 5 ಸಾವಿರಕ್ಕಿಂತ ಹೆಚ್ಚಿಗೆ ಜನವಸತಿಯಿರುವ ಪೇಟೆಯ ಊರುಗಳು ಈ ಜಿಲ್ಲೆಯಲ್ಲಿ ಕೆಳಗಿನಂತೆ ಇರುತ್ತವೆ.

| | |
|---|---|
| ಬದಾಮಿ ತಾಲೂಕಿನಲ್ಲಿ– | 1 ಬದಾಮಿ 2 ಕೆರೂರ. |
| ಬಾಗಿಲುಕೋಟೆ ತಾಲೂಕಿನಲ್ಲಿ– | 1 ಕಲಾದಗಿ 2 ಸಿರೂರ |
| ಬಾಗೇವಾಡಿ ತಾಲೂಕಿನಲ್ಲಿ– | 1 ಬಾಗೇವಾಡಿ 2 ಮನಗೋಳಿ |
| ವಿಜಾಪೂರ ತಾಲೂಕಿನಲ್ಲಿ– | 1 ಬಬಲೇಶ್ವರ 2 ಕಾಖಂಡಕಿ 3 ತಿಕೋಟಾ |
| ಹುನಗುಂದ ತಾಲೂಕಿನಲ್ಲಿ– | 1 ಸೂಳೀಕೇರಿ 2 ಹುನಗುಂದ |
| ಇಂಡಿ ತಾಲೂಕಿನಲ್ಲಿ– | 1 ಇಂಡಿ |
| ಜಮಖಂಡಿ ತಾಲೂಕಿನಲ್ಲಿ-- | 1 ತೇರದಾಳ 2 ಬನಹಟ್ಟಿ 3 ರಬಕವಿ 4 ಹೊಸೂರ |
| ಮುದ್ದೇಬಿಹಾಳ ತಾಲೂಕಿನಲ್ಲಿ– | 1 ತಾಳೀಕೋಟೆ 2 ಮುದ್ದೇಬಿಹಾಳ 3 ನಾಲತವಾಡ |
| ಮುಧೋಳ ತಾಲೂಕಿನಲ್ಲಿ-- | 1 ಮುಧೋಳ 2 ಮಹಾಲಿಂಗಪುರ |
| ಸಿಂದಗಿ ತಾಲೂಕಿನಲ್ಲಿ– | 1 ಸಿಂದಗಿ |
| ಬೀಳಗಿ ಪೇಠಾದಲ್ಲಿ- | 1 ಬೀಳಗಿ |

## ಅಭ್ಯಾಸ

1 ವಿಜಾಪುರದಲ್ಲಿ ನೋಡತಕ್ಕ ಪ್ರಾಚೀನ ಕಟ್ಟಡಗಳು ಯಾವವು?

2 ಬಾಗಿಲುಕೋಟೆಯಲ್ಲಿ ಯಾವ ಯಾವ ವಸ್ತುಗಳು ತಯಾರಾಗುತ್ತವೆ?

# 7 ಸ್ಥಾನಿಕ ಪ್ರಜಾರಾಜ್ಯ

## ಗ್ರಾಮಪಂಚಾಯತಿಗಳು

ನಾವು ಆರೋಗ್ಯದಿಂದ ಜೀವಿಸಬೇಕಾದರೆ ನಮ್ಮ ಮನೆಯನ್ನು ಸ್ವಚ್ಛವಾಗಿಟ್ಟುಕೊಳ್ಳಬೇಕು. ಅದು ಗಾಳಿ ಬೆಳಕುಗಳಿಂದ ಕೂಡಿ ಆರೋಗ್ಯಕರವಾಗಿರಬೇಕು. ಒಳ್ಳೆಯ ಸ್ಥಿತಿಯಲ್ಲಿ ಇರಬೇಕು. ಈ ರೀತಿಯಲ್ಲಿ ಮನೆಯನ್ನು ಇಟ್ಟುಕೊಳ್ಳುವದು ಮನೆಯವರ ಕೆಲಸ. ಪ್ರತಿಯೊಂದು ಮನೆಯವರು ತಮ್ಮದನ್ನಷ್ಟೇ ನೋಡಿಕೊಂಡರೆ ಆರೋಗ್ಯದಿಂದ ಜೀವಿಸುವದು ಸಾಧ್ಯವಾಗುವದಿಲ್ಲ. ಊರವರೆಲ್ಲರು ಆರೋಗ್ಯದಿಂದ ಜೀವಿಸಬೇಕಾದರೆ ಮನೆಯಂತೆ ನಮ್ಮ ಊರಲ್ಲಿಯ ದಾರಿಗಳು ಸ್ವಚ್ಛವಾಗಿರಬೇಕು. ಕೆರೆ ಬಾವಿಗಳು ಒಳ್ಳೆಯ ಸ್ಥಿತಿಯಲ್ಲಿರ ಬೇಕು. ಸ್ವಚ್ಛವಾಗಿರಬೇಕು. ಹೀಗೆ ಊರನ್ನು ಇಟ್ಟುಕೊಳ್ಳುವದು ಊರಲ್ಲಿಯ ಯಾರೊಬ್ಬರದೇ ಕೆಲಸವಲ್ಲ. ಊರವರೆಲ್ಲರು ಕೂಡಿ ಅದನ್ನು ಮಾಡಬೇಕಾಗುವದು. ಇದಕ್ಕಾಗಿ ಊರವರೆಲ್ಲರು ಕೂಡಿ ಒಂದು ಸಂಸ್ಥೆಯನ್ನು ಮಾಡಿಕೊಳ್ಳಬೇಕಾಗುತ್ತದೆ. ಈ ಕೆಲಸಕ್ಕಾಗಿ ಹಳ್ಳಿಗಳಲ್ಲಿ ಗ್ರಾಮಪಂಚಾಯ್ತಿ ಎಂಬ ಸಂಸ್ಥೆಯು ಇರುತ್ತದೆ.

ಊರವರೆಲ್ಲರು ಕೂಡಿ ಪ್ರತಿ ನಾಲ್ಕು ವರುಷಗಳಿಗೊಮ್ಮೆ ತಮ್ಮ ಊರ ಮುಂದಾಳುಗಳನ್ನು ಗೊತ್ತು ಮಾಡುತ್ತಾರೆ. ಯಾರಿಗೆ ಹೆಚ್ಚು ಜನರ ಬೆಂಬಲವಿರುವದೋ ಅವರು ಊರ ಮುಂದಾಳುಗಳೆಂದು ತಿಳಿಯಲಾಗುತ್ತದೆ. ಇವರೇ ಗ್ರಾಮಪಂಚಾಯತಿಯ ಸದಸ್ಯರು. ಇವರು ತಮ್ಮನ್ನು ಆರಿಸಿ ಕೊಟ್ಟ ಅವಧಿಯ ಲ್ಲಿ ಗ್ರಾಮಪಂಚಾಯತಿಯ ಕೆಲಸಗಳನ್ನು ನೋಡಿಕೊಳ್ಳುತ್ತಾರೆ. ಪ್ರತಿಯೊಂದು ಗ್ರಾಮಪಂಚಾಯತಿ ಯಲ್ಲಿ ಆ ಊರ ಜನಸಂಖ್ಯೆಯ ಪ್ರಮಾಣದಲ್ಲಿ ೧೧ ರಿಂದ ೧೫ ಜನ ಸದಸ್ಯರು ಇರುವರು. ನಿಮ್ಮ ಊರ ಪಂಚಾಯತಿಯಲ್ಲಿ ಎಷ್ಟು ಜನ ಸದಸ್ಯರಿರುವರು? ಈಗ ಯಾರು ಯಾರು ಇರುವರು?

ಗ್ರಾಮಪಂಚಾಯತಿಯ ಸದಸ್ಯರು ತಮ್ಮೊಳಗಿನವನೊಬ್ಬನನ್ನು ಮುಖ್ಯಸ್ಥನನ್ನಾಗಿ ಆರಿಸಿಕೊಳ್ಳುವರು. ಹೀಗೆ ಆರಿಸಿಕೊಂಡ ಮುಖಂಡನಿಗೆ 'ಚೆಯುರಮನ್' ಎಂದು ಹೇಳುತ್ತಾರೆ. ಗ್ರಾಮಪಂಚಾಯತಿಯವರು ತಮ್ಮ ಊರಿಗೆ ಸಂಬಂಧಿಸಿದ ಹಲವು ಕೆಲಸಗಳನ್ನು ಮಾಡುತ್ತಾರೆ.

ಪ್ರತಿಯೊಂದು ಊರಲ್ಲಿ ಜನರ ಸಂಚಾರಕ್ಕೆ ಅನುಕೂಲವಾದ ದಾರಿಗಳು ಇರುವದು ಅವಶ್ಯವಿರುತ್ತದೆ. ಇಂಥ ದಾರಿಗಳನ್ನು ಮಾಡಿಸುವದು, ಅವುಗಳನ್ನು ಸ್ವಚ್ಛವಾಗಿಡುವದು, ಒಳ್ಳೆಯ ಸ್ಥಿತಿಯಲ್ಲಿ ಇಡುವದು, ರಾತ್ರಿಯಲ್ಲಿ ಆ ದಾರಿಗಳ ಮೇಲೆ ಅಡ್ಡಾಡುವದಕ್ಕೆ ಅನುಕೂಲವಾಗುವಂತೆ ದೀವಗಳನ್ನು ಹಚ್ಚುವದು ಈ ಕೆಲಸಗಳನ್ನು ಗ್ರಾಮಪಂಚಾಯತಿಯು ಮಾಡುತ್ತದೆ.

ಊರ ಜನರಿಗೆ ಕುಡಿಯುವದಕ್ಕಾಗಿಯೂ ಬಳಕೆಗಾಗಿಯೂ ನೀರು ಅತ್ಯಾವಶ್ಯಕವಿರುತ್ತದೆ. ಈ ನೀರು ಹಳ್ಳಿಗಳಿಗೆ ಕೆರೆ, ಬಾವಿ, ಹೊಳೆ, ಹಳ್ಳ ಮೊದಲಾದ ಜಲಾಶಯಗಳಿಂದ ದೊರೆಯುವದು. ಕುಡಿಯುವ ನೀರನ್ನು ಸ್ವಚ್ಛವಾಗಿಡುವದು, ಊರ ಜನರಿಗೆ ಅನುಕೂಲವಾಗುವಂತೆ ಬಾವಿ ಮೊದಲಾದವುಗಳನ್ನು ತೆಗಿಸುವದು, ಕಟ್ಟಿಸುವದು ಮೊದಲಾದ ಕೆಲಸಗಳನ್ನು ಗ್ರಾಮಪಂಚಾಯತಿಯು ಮಾಡುತ್ತದೆ.

ಇದಲ್ಲದೆ ಸಾರ್ವಜನಿಕ ಪಾಯಖಾನೆಗಳನ್ನೂ ಕಾಲುಮಡಿ ಸ್ಥಳಗಳನ್ನೂ ಕಟ್ಟಿಸುವದು, ಗೊಬ್ಬರ ಸಂಗ್ರಹಿಸುವದು, ಊರಲ್ಲಿ ರೋಗಗಳು ಹಬ್ಬದಂತೆ ಪ್ರತಿಬಂಧಕ ಉಪಾಯ ಕೈಕೊಳ್ಳುವದು ಮೊದಲಾದ ಕೆಲಸಗಳನ್ನೂ ಗ್ರಾಮಪಂಚಾಯತಿಯು ಮಾಡುತ್ತದೆ. ಇವೆಲ್ಲ ಕೆಲಸಗಳ ಮೇಲ್ವಿಚಾರಣೆ ಮಾಡುವದಕ್ಕಾಗಿಯೂ ಪಂಚಾಯತಿಯ ಲೆಕ್ಕಪತ್ರಗಳನ್ನು ಸರಿಯಾಗಿ ಇಡುವದಕ್ಕಾಗಿಯೂ ಸರಕಾರ

ದಿಂದ ನೇಮಿಸಲ್ಪಟ್ಟ ಸೆಕ್ರೆಟರಿ ಎಂಬ ಅಧಿಕಾರಿಯು ಇರುತ್ತಾನೆ. ಅವನ ಕೈಕೆಳಗೆ ಗ್ರಾಮಪಂಚಾಯತಿಯಿಂದ ನೇಮಿಸಲ್ಪಟ್ಟ ನವಕರರು ಇರುತ್ತಾರೆ.

ಗ್ರಾಮಪಂಚಾಯತಿಯು ತನ್ನ ಕೆಲಸಗಳನ್ನು ಸರಿಯಾಗಿ ನಾಗಿಸುವಕ್ಕಾಗಿ ಊರಲ್ಲಿಯ ಮನೆಗಳು, ಚಕ್ಕಡಿ ಮೊದಲಾದ ವಾಹನಗಳು ಇವುಗಳ ಮೇಲೆ ಕರ ಹೇರುತ್ತದೆ. ಉದ್ಯೋಗ ವ್ಯಾಪಾರ ಮೊದಲಾದವುಗಳ ಮೇಲೆಯೂ ಕರ ಹಾಕುತ್ತದೆ. ಇದಲ್ಲದೆ ಸರಕಾರದವರು ಆ ಊರ ಭೂಮಿಯ ತೆರಿಗೆಯಿಂದ ಬಂದಹಣದಲ್ಲಿ ಕೆಲವು ಭಾಗವನ್ನು ಪಂಚಾಯತಿಗೆ ಕೊಡುತ್ತಾರೆ.

## ಮುನಿಸಿಪಾಲಿಟಿ

ಊರು ದೊಡ್ಡದಿದ್ದಂತೆ ಅದರ ಅವಶ್ಯಕತೆಗಳು ಬೆಳೆಯುತ್ತ ಹೋಗುತ್ತವೆ. ಆ ಅವಶ್ಯಕತೆಗಳನ್ನು ಪೂರಯಿಸಿಕೊಳ್ಳುವದಕ್ಕೆ ಹೆಚ್ಚು ಹಣವೂ, ಅಧಿಕಾರವೂ ಬೇಕಾಗುತ್ತದೆ. ಆದ್ದರಿಂದ ಅಂಥ ದೊಡ್ಡ ಊರುಗಳಲ್ಲಿ ಗ್ರಾಮಪಂಚಾಯತಿಗಳಿಗಿಂತ ಹೆಚ್ಚಿಗೆ ಅಧಿಕಾರ ಪಡೆದ ಮುನಿಸಿಪಾಲಿಟಿಗಳೆಂಬ ಸಂಸ್ಥೆಗಳು ಇರುತ್ತವೆ. ಗ್ರಾಮಪಂಚಾಯತಿಯ ಸದಸ್ಯರನ್ನು ಆರಿಸುವಂತೆಯೇ ಮುನಿಸಿಪಾಲಿಟಿಯ ಸದಸ್ಯರನ್ನು ಊರವರು ಆರಿಸಿರುವರು. ಪ್ರತಿಯೊಂದು ಮುನಿಸಿಪಾಲಿಟಿಯಲ್ಲಿ ಆ ಊರ ಜನಸಂಖ್ಯೆಗೆ ಅನುಸರಿಸಿ ಸದಸ್ಯರು ಇರುತ್ತಾರೆ. ಈ ಸದಸ್ಯರ ಮುಖಂಡನಿಗೆ ಅಧ್ಯಕ್ಷನೆಂದು ಹೆಸರು. ಗ್ರಾಮಪಂಚಾಯತಿಗೆ ಸೆಕ್ರೆಟರಿ ಇದ್ದಂತೆ ಚಿಕ್ಕ ಮುನಿಸಿಪಾಲಿಟಿಗಳಿಗೆ ಒಬ್ಬ ಸೆಕ್ರೆಟರಿಯು ಇರುತ್ತಾನೆ. ದೊಡ್ಡ ಮುನಿಸಿಪಾಟಿಗಳಿಗೆ ಚೀಫ ಆಫಿಸರ ಎಂಬ ಅಧಿಕಾರಿಯು ಇರುತ್ತಾನೆ. ಮುನಸಿಪಾಲಿಟಿಯು ಗ್ರಾ,ಮಪಂಚಾಯತಿಯು ಮಾಡುವ ಕೆಲಸಗಳನ್ನೆಲ್ಲ ಮಾಡುವದಲ್ಲದೆ ಊರಲ್ಲಿ ಅಸ್ಪತ್ರೆಗಳನ್ನೂ

ದವಾಖಾನೆಗಳನ್ನೂ ತೆಗೆಯುವದು, ಸಾರ್ವಜನಿಕ ವಾಚನಾಲಯ ಉದ್ಯಾನ ಮೊದಲಾದವುಗಳನ್ನು ನಡಿಸುವದು ಮೊದಲಾದ ಕೆಲಸಗಳನ್ನು ಮಾಡುತ್ತದೆ. ವಿಜಾಪುರ ಜಿಲ್ಲೆಯಲ್ಲಿ ವಿಜಾಪುರ, ಬಾಗಿಲುಕೋಟೆ, ಗುಳೇದಗುಡ್ಡ, ಇಳಕಲ್ಲ, ಜಮುಖಂಡಿ, ಬನಹಟ್ಟಿ, ತೇರದಾಳ, ರಬಕವಿ, ಮುಧೋಳ, ಮಹಾಲಿಂಗಪುರ ಈ ಊರುಗಳಲ್ಲಿ ಮುನಿಸಿ ಪಾಲಿಟಿಗಳು ಇರುತ್ತವೆ.

## ತಾಲೂಕು ಅಭಿವೃದ್ಧಿ ಬೋರ್ಡು

ನಮ್ಮ ಮನೆಯು ನಮ್ಮ ಊರಿನ ಒಂದು ಭಾಗವಾಗಿರುವಂತೆ ನಮ್ಮ ಊರು ನಮ್ಮ ತಾಲೂಕಿನಲ್ಲಿಯ ಒಂದು ಗ್ರಾಮವಾಗಿದೆ. ನಮ್ಮ ಮನೆಯವರ ಜೀವನವು ನಮ್ಮ ಊರ ಜನರಿಗೆ ಹೊಂದಿಕೊಂಡಿರುವಂತೆಯೇ ನಮ್ಮ ಊರ ಜೀವನವು ನಮ್ಮ ತಾಲೂಕಿನ ಜನರ ಜೀವನದೊಂದಿಗೆ ಹೊಂದಿಕೊಂಡಿದೆ. ಆದ್ದರಿಂದ ಊರ ಅನುಕೂಲತೆಗಳನ್ನು ನೋಡಿಕೊಳ್ಳುವದಕ್ಕೆ ಗ್ರಾಮಪಂಚಾಯತಿ ಇಲ್ಲವೆ ಮುನಿಸಿಪಾಲಿಟಿಯು ಇರುವಂತೆ ತಾಲೂಕಿನ ಅನುಕೂಲತೆಗಳನ್ನು ನೋಡಿಕೊಳ್ಳಲು 'ತಾಲೂಕ ಅಭಿವೃದ್ಧಿ ಬೋರ್ಡು'' ಎಂಬ ಸಂಸ್ಥೆಯು ಇರುತ್ತದ. ಈ ಸಂಸ್ಥೆಯ ಸದಸ್ಯರನ್ನು ತಾಲೂಕಿನ ಜನರೆಲ್ಲರು ಕೂಡಿ ಆರಿಸುತ್ತಾರೆ. ಗ್ರಾಮಪಂಚಾಯತಿಗಳಂತೆಯೇ ತಾಲೂಕು ಬೋರ್ಡಿನ ಸದಸ್ಯರನ್ನು ನಾಲ್ಕು ವರುಷಗಳಿಗೊಮ್ಮೆ ಆರಿಸಲಾಗುತ್ತದೆ. ತಾಲೂಕಿನ ಜನಸಂಖ್ಯೆಗೆ ಅನುಸರಿಸಿ ೧೫ ರಿಂದ ೧೯ ಸದಸ್ಯರು ಈ ತಾಲೂಕ ಅಭಿವೃದ್ಧಿ ಬೋರ್ಡಿನಲ್ಲಿ ಇರುತ್ತಾರೆ.

ತಾಲೂಕು ಅಭಿವೃದ್ಧಿ ಬೋರ್ಡು ತನ್ನ ತಾಲೂಕಿನಲ್ಲಿಯ ಗ್ರಾಮಗಳನ್ನು ಒಂದಕ್ಕೊಂದು ಹೊಂದಿಸುವಂತೆ ದಾರಿಗಳನ್ನು ರಚಿಸುತ್ತದೆ. ಅವುಗಳನ್ನು ಸುವ್ಯವಸ್ಥಿತವಾಗಿ ಇಡುತ್ತದೆ. ಆ ದಾರಿಗಳ ಬದಿಯಲ್ಲಿ ನೆರಳಾಗುವಂತೆ ಗಿಡಮರಗಳನ್ನು ಹಚ್ಚುತ್ತದೆ. ಪ್ರವಾಸಿಕರ ಬಂಗಲೆ

ಗಳನ್ನೂ ಧರ್ಮಶಾಲೆಗಳನ್ನೂ ಕಟ್ಟಿಸಿ ಸುಸ್ಥಿತಿಯಲ್ಲಿ ಇಡುತ್ತದೆ ತಾಲೂಕಿನ ಗ್ರಾಮಗಳಲ್ಲಿ ಪ್ರಾಥಮಿಕ ಶಾಲೆಯ ಕಟ್ಟಡಗಳನ್ನೂ ಆಸ್ಪತ್ರೆಗಳನ್ನೂ ಕಟ್ಟಿಸುತ್ತದೆ. ತಾಲೂಕಿನ ಜನರ ಆರೋಗ್ಯವನ್ನು ಕಾಯ್ದುಕೊಳ್ಳುವದಕ್ಕಾಗಿ ವೈಲಿ ಚುಚ್ಚಿಸುವದು, ರೋಗಗಳು ಹಬ್ಬದಂತೆ ಇನಾಕ್ಯುಲೇಶನ್ ಮೊದಲಾದವನ್ನು ಮಾಡಿಸುವದು, ಔಷಧಗಳನ್ನು ಪೂರಯಿಸುವದು ಮೊದಲಾದ ಕಾರ್ಯಗಳನ್ನು ಮಾಡುತ್ತದೆ. ಚಿಕ್ಕಪುಟ್ಟ ನೀರಾವರಿ ಯೋಜನೆಗಳನ್ನು ಮಾಡುತ್ತದೆ. ಅಲ್ಲದೆ ತಾಲೂಕಿನಲ್ಲಿಯ ಗ್ರಾಮಪಂಚಾಯತಿಗಳ ಕೆಲಸದ ಮೇಲ್ವಿಚಾರಣೆ ಮಾಡುತ್ತದೆ.

ತಾಲೂಕು ಅಭಿವೃದ್ಧಿ ಬೋರ್ಡಿನ ಕೆಲಸವು ಸರಿಯಾಗಿ ನಡೆಯುವದಕ್ಕೆ ಸರಕಾರವು ಆ ತಾಲೂಕಿನ ತೆರಿಗೆಯಲ್ಲಿ ಕೆಲವೊಂದು ಭಾಗವನ್ನು ಕೊಡುತ್ತದೆ. ಅಲ್ಲದೆ ತಾಲೂಕುಬೋರ್ಡು ಆ ತಾಲೂಕಿನ ಭೂಮಿಯ ತೆರಿಗೆಯ ಮೇಲೆ ಲೋಕಲ್ ಸೆಸ್ ವಸೂಲ ಮಾಡುತ್ತದೆ.

ತಾಲೂಕು ಅಭಿವೃದ್ಧಿ ಬೋರ್ಡಿನ ಸದಸ್ಯರು ತಮ್ಮೊಳಗಿಂದ ಒಬ್ಬ ಮುಖ್ಯಸ್ಥನನ್ನು ಆರಿಸಿಕೊಳ್ಳುತ್ತಾರೆ. ಅವನಿಗೆ ಅಧ್ಯಕ್ಷ ಎಂದು ಹೆಸರು. ತಾಲೂಕಿನ ಮುಖ್ಯಾಧಿಕಾರಿಯಾದ ತಹಸಿಲದಾರನು ಇಲ್ಲವೆ ಸರಕಾರದಿಂದ ನೇಮಿಸಲ್ಪಟ್ಟ ತಾಲೂಕು ಅಭಿವೃದ್ಧಿ ಘಟಕದ ಅಧಿಕಾರಿಯು ಮುಖ್ಯ ಕಾರ್ಯಾಧಿಕಾರಿಯಾಗಿ ಕೆಲಸ ನಾಗಿಸುತ್ತಾನೆ.

ಹೀಗೆ ನಮ್ಮ ಊರಿನ, ತಾಲೂಕಿನ ಆಡಳಿತೆಯು ನಾವು ಆರಿಸಿಕೊಟ್ಟ ನಮ್ಮ ಮುಂದಾಳುಗಳಿಂದಲೇ ನಡೆಯುತ್ತದೆ.

## ಅಭ್ಯಾಸ

1 ಗ್ರಾಮಪಂಚಾಯತಿಯ ಸದಸ್ಯರ ಆಯ್ಕೆಯು ಎಷ್ಟು ದಿವಸಗಳಿಗೊಮ್ಮೆ ನಡೆಯುವದು ?

2 ಗ್ರಾಮಪಂಚಾಯತಿಯು ಯಾವ ಯಾವ ಕೆಲಸಗಳನ್ನು ಮಾಡುವದು ?
3 ತಾಲೂಕು ಅಭಿವೃದ್ಧಿ ಬೋರ್ಡಿನ ಕೆಲಸಗಳೇನು ?
4 ಗ್ರಾಮಪಂಚಾಯತಿಗಳಿಗೆ ಹಣವು ಯಾವ ಯಾವ ರೀತಿಯಲ್ಲಿ ಬರುವದು ?
5 ತಾಲೂಕ ಅಭಿವೃದ್ಧಿ ಬೋರ್ಡಿನ ಮುಖ್ಯಾಧಿಕಾರಿಯು ಯಾರು ?

---

## 8 ಆಡಳತೆ

ಗ್ರಾಮಪಂಚಾಯತಿಗಳು, ಮುನಿಸಿಪಾಲಿಟಿಗಳು ತಮ್ಮ ತಮ್ಮ ಊರಿನ ಅವಶ್ಯಕತೆಗಳನ್ನು ಪೂರಯಿಸುತ್ತವೆ ತಾಲೂಕು ಅಭಿವೃದ್ಧಿ ಬೋರ್ಡು ಆ ತಾಲೂಕಿನ ಅವಶ್ಯಕತೆಗಳನ್ನು ಪೂರಯಿಸುತ್ತದೆ. ತಮಗೆ ಸಂಬಂಧಿಸಿದ ಪ್ರದೇಶಗಳ ಸ್ವಚ್ಛತೆ, ಆರೋಗ್ಯ ಇವುಗಳನ್ನು ಕಾಯ್ದುಕೊಳ್ಳುವದೇ ಇವುಗಳ ಮುಖ್ಯ ಕೆಲಸ. ಇಷ್ಟರಿಂದಲೇ ನಮ್ಮ ಎಲ್ಲ ತೊಡಕು ತೊಂದರೆಗಳು ದೂರಾಗುವದಿಲ್ಲ. ಊರಲ್ಲಿ ಕಳವು ಬಡಿದಾಟಗಳು, ಕೊಲೆ ಸುಲಿಗೆಗಳು ಆಗದಂತೆ ಮಾಡಬೇಕು. ಎಲ್ಲರಿಗೂ ಸರಿಯಾದ ನ್ಯಾಯ ದೊರೆಯಬೇಕು. ಇನ್ನೂ ಎಷ್ಟೋ ಕೆಲಸಗಳು ಇರುತ್ತವೆ. ಇವೆಲ್ಲ ಕಾರ್ಯಗಳು ಸರಿಯಾಗಿ ನಡೆಯುವಂತೆ ಸರಕಾರವು ವ್ಯವಸ್ಥೆ ಮಾಡಿರುತ್ತದೆ. ನಾವು ಆರಿಸಿಕೊಟ್ಟ ನಮ್ಮ ಪ್ರತಿನಿಧಿಗಳಿಂದಲೇ ಈ ಸರಕಾರವಾಗಿರುತ್ತದೆ. ಸರಕಾರವು ನಮ್ಮ ದೇಶಕ್ಕೆ, ನಮ್ಮ ರಾಜ್ಯಕ್ಕೆ ಸಂಬಂಧಿಸಿದ ಎಲ್ಲ ಕೆಲಸಗಳು ಸರಿಯಾಗಿ ಸಾಗುವಂತೆ, ಅಧಿಕಾರಿಗಳನ್ನೂ ನವಕರರನ್ನೂ ನೇಮಿಸುತ್ತದೆ. ಅವರು ತಮ್ಮ ತಮ್ಮ ಸ್ಥಾನದಲ್ಲಿದ್ದು ಪ್ರಜಾಹಿತದ ಕಾರ್ಯಗಳನ್ನು ಮಾಡುತ್ತಾರೆ.

ಹಳ್ಳಿಗಳಲ್ಲಿ ಗ್ರಾಮಪಂಚಾಯತಿಗಳ ಕಾರ್ಯಗಳನ್ನು ನೋಡಿಕೊಳ್ಳಲಿಕ್ಕೆ ಸರಕಾರದಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಇರುವರಷ್ಟೇ.

ಇವರು ಗ್ರಾಮಪಂಚಾಯತಿಗಳ ಕೆಲಸಗಳನ್ನೂ ಗ್ರಾಮಕ್ಕೆ ಸಂಬಂಧಿಸಿದ ಸರಕಾರದ ಬೇರೆ ಕೆಲಸಗಳನ್ನೂ ನೋಡಿಕೊಳ್ಳುತ್ತಾರೆ. ಈ ಗ್ರಾಮಾಧಿಕಾರಿಯಲ್ಲದೆ ತಾಲೂಕುಗಳಲ್ಲಿಯೂ ಜಿಲ್ಲೆಗಳಲ್ಲಿಯೂ ಹಲವರು ಸರಕಾರದ ಅಧಿಕಾರಿಗಳು, ನವಕರರು ಇರುವರು.

## ತಾಲೂಕಿನ ಅಧಿಕಾರಿಗಳು

**ತಹಸಿಲದಾರ:**—ಇವನು ತಾಲೂಕಿನ ಮುಖ್ಯ ಅಧಿಕಾರಿಯು. ಗ್ರಾಮಗಳಲ್ಲಿರುವ ಗ್ರಾಮಾಧಿಕಾರಿಗಳ ಕೆಲಸದ ಮೇಲ್ವಿಚಾರಣೆ ಮಾಡುವನು. ತಾಲೂಕಿನಲ್ಲಿಯ ಗ್ರಾಮಗಳ ಕಂದಾಯವನ್ನು ವಸೂಲ ಮಾಡುವದು, ಭೂಮಿಗಳು ಯೋಗ್ಯ ಹಕ್ಕುದಾರನ ಕಡೆಗೆ ಇರುವಂತೆ ನೋಡಿಕೊಳ್ಳುವದು, ಶಾಂತತೆ ಕಾಯ್ದುಕೊಳ್ಳುವದು ಇವು ತಹಸಿಲ ದಾರನ ಮುಖ್ಯ ಕೆಲಸಗಳು. ಪೇಠಾ ಸ್ಥಳಗಳಲ್ಲಿ ಡೆಪುಟಿ ತಹಸಿಲ ದಾರನು ಈ ಕೆಲಸಗಳನ್ನು ಮಾಡುವನು.

**ಫೌಜದಾರ:**—ತಾಲೂಕಿನಲ್ಲಿ ಕಳವು, ಬಡಿದಾಟ, ಕೊಲೆ ಸುಲಿಗೆಗಳು ಆಗದಂತೆ ವ್ಯವಸ್ಥೆ ಇಡುವದು, ಅಪರಾಧಗಳನ್ನು ಗೊತ್ತು ಹಚ್ಚಿ ಅಪರಾಧ ಮಾಡಿದವರೆಂದು ಕಂಡು ಬಂದವರ ಮೇಲೆ ಖಟ್ಲೆ ಹಾಕುವದು ಇವು ಫೌದಾರನ ಕೆಲಸಗಳು. ಒಂದೊಂದು ತಾಲೂಕಿ ನಲ್ಲಿ ಇಬ್ಬರು ಮೂವರು ಫೌಜದಾರರು ಇರುವರು. ಅವರು ತಮಗೆ ನೇಮಿಸಿಕೊಟ್ಟ ಭಾಗದಲ್ಲಿ ಈ ಕೆಲಸ ಮಾಡುವರು. ಇವರ ಸಹಾ ಯಕ್ಕೆ ಕಾನ್‌ಸ್ಟೆಬಲ್ (ಪೋಲೀಸ ಶಿಪಾಯಿ) ಎಂಬ ನವಕರರು ಇರುವರು

**ಸಬ್‌ಜಜ್ಜ:**—ತಾಲೂಕಿನ ಜನರ ಕೊಡಕೊಳ್ಳುವ ವ್ಯವಹಾರ ದಲ್ಲಿ ಬಂದ ಜಗಳ, ಸ್ಥಾವರ ಆಸ್ತಿಗಳಾದ ಹೊಲಮನೆಗಳ ಬಗ್ಗೆ ಬಂದ ಜಗಳ ಇವುಗಳನ್ನು ವಿಚಾರಿಸಿ ನಿರ್ಣಯಕೊಡುವ ಅಧಿಕಾರಿಗೆ

ಸಬ್ ಜಜ್ಜ ಎಂಬು ಹೆಸರು. ಇವನು ತಾಲೂಕಿನ ಸ್ಥಳದಲ್ಲಿ ಇರುವನು. ಕೆಲಸವು ಕಡಿಮೆ ಇರುವ ಕಡೆಗಳಲ್ಲಿ ಎರಡು ತಾಲೂಕುಗಳಿಗೆ ಕೂಡಿ ಒಬ್ಬ ಸಬ್ ಜಜ್ಜನಿರುವನು.

**ಅಸಿಸ್ಟಂಟ ಡೆಪುಟಿ ಎಜ್ಯುಕೇಶನಲ್ ಇನ್ ಸ್ಪೆಕ್ಟರ:—** ಈ ಅಧಿಕಾರಿಗಳು ಹಳ್ಳಿಗಳಲ್ಲಿರುವ ಪ್ರಾಥಮಿಕ ಶಾಲೆಗಳ ಮೇಲ್ವಿಚಾರಣೆ ಮಾಡುವರು.

**ಸಬ್ ರಜಿಸ್ಟ್ರಾರ:—** ಜನರು ತಾವು ಮಾಡಿದ ವ್ಯವಹಾರಗಳ ದಾಖಲೆಗಳು ಸರಕಾರದಲ್ಲಿ ಉಳಿಯಬೇಕೆಂದು ಅವುಗಳನ್ನು ಸರಕಾರ ದಲ್ಲಿ ನೋಂದು ಮಾಡಿಸುವರು. ಇಂಥ ಕಾಗದಗಳನ್ನು ನೋಂದು ಮಾಡಿಕೊಳ್ಳುವ ಸಲುವಾಗಿ ಈ ಅಧಿಕಾರಿಯು ಇರುವನು.

**ಸಬ್ ಪೋಸ್ಟ ಮಾಸ್ತರ:--** ಹಳ್ಳಿಗಳಲ್ಲಿ ಅಂಚೆಯನ್ನು ಮುಟ್ಟಿ ಸುವದಕ್ಕೆ ಪೋಸ್ಟಮನ್ನರು, ಮತ್ತು ಕೆಲವು ಊರುಗಳಲ್ಲಿ ಬ್ರಾಂಚ ಪೋಸ್ಟ ಮಾಸ್ತರರು ಇರುವರು. ಈ ಕೆಲಸದ ಮೇಲ್ವಿಚಾರಣೆಯನ್ನು ಸಬ್ ಪೋಸ್ಟ ಮಾಸ್ತರರು ಮಾಡುವರು

ಇವರೆಲ್ಲರು ತಾಲೂಕಿನ ಅಧಿಕಾರಿಗಳು. ಇವರು ತಾಲೂಕಿನ ಸ್ಥಳದಲ್ಲಿ ಇಲ್ಲವೆ ಗೊತ್ತುಪಡಿಸಿದ ಊರಲ್ಲಿ ಇದ್ದುಕೊಂಡು ತಮಗೆ ಒಪ್ಪಿಸಿದ ಕೆಲಸಗಳನ್ನು ಮಾಡುವರು.

## ಜಿಲ್ಲೆಯ ಅಧಿಕಾರಿಗಳು

**ಡೆಪುಟಿ ಕಮಿಶನರ:—** ಇವನು ಜಿಲ್ಲೆಯ ಮುಖ್ಯ ಅಧಿ ಕಾರಿಯು ತನ್ನ ಜಿಲ್ಲೆಯಲ್ಲಿಯ ತಹಶಿಲದಾರರ ಕೆಲಸಗಳ ಮೇಲ್ವಿ ಚಾರಣೆ ಮಾಡುವನು. ಜಿಲ್ಲೆಯಲ್ಲಿಯ ಹೊಲದ ತೆರಿಗೆಯನ್ನು ವಸೂಲ ಮಾಡುವನು. ಬೆಳೆಗೇಡಾಗಿದ್ದರೆ ತೆರಿಗೆಯ ಹಣವನ್ನು ತಡ ಹಿಡಿಯು ವಂತೆ ಇಲ್ಲವೆ ಕಡಿಮೆ ಮಾಡುವಂತೆ ಸರಕಾರಕ್ಕೆ ಶಿಫಾರಸು ಮಾಡು




ಸಬ್ ಜಜ್ಜ ಕೋರ್ಟು




ಶಾಲಾಧಿಕಾರಿ

ವನು. ಜಿಲ್ಲೆಯಲ್ಲಿ ಶಾಂತತೆ ಕಾಯ್ದುಕೊಳ್ಳುವ ಜವಾಬು ದಾರಿಯು ಇವನ ಮೇಲೆ ಇರುತ್ತದೆ.

**ಪೋಲೀಸ ಸುಪರಿಂಟೆಂಡೆಂಟ**—ಶಾಂತತೆಯನ್ನು ಕಾಯ್ದು ಕೊಳ್ಳಲು ತಾಲೂಕುಗಳಲ್ಲಿ ಫೌಜದಾರರು ಇರುವರಷ್ಟೆ. ಅವರು ಮಾಡಿದ ಕೆಲಸಗಳ ಮೇಲ್ವಿಚಾರಣೆ ಮಾಡುವದಕ್ಕೆ ಜಿಲ್ಲೆಯ ಸ್ಥಳದಲ್ಲಿ ಈ ಅಧಿಕಾರಿಯು ಇರುವನು ಇವನ ಸಹಾಯಕ್ಕೆ ಡೆಪುಟಿ ಸುಪ ರಿಂಟೆಂಡೆಂಟರೂ ಸರ್ಕಲ್ ಪೋಲೀಸ ಇನ್ಸ್ಪೆಕ್ಟರರೂ ಇರುವರು.

**ಡಿಸ್ಟ್ರಿಕ್ಟ ಜಜ್ಜ:**— ತಾಲೂಕಿನಲ್ಲಿರುವ ಸಬ್‌ಜಜ್ಜ ಕೋರ್ಟು ಗಳ ನಿರ್ಣಯದ ಪುನರ್ವಿಚಾರಣೆ ಮಾಡಿ ನಿರ್ಣಯ ಕೊಡುವದು ಇವನ ಕೆಲಸ. ಕಳವು, ದರೋಡೆ, ಕೊಲೆ, ಸುಲಿಗೆ ಇವುಗಳನ್ನು ಮಾಡಿದ ಆರೋಪಿಗಳ ವಿಚಾರಣೆಯು ತಾಲೂಕಿನ ಸ್ಥಳದಲ್ಲಿ ಆಗು ತ್ತದೆ. ಆದರೆ ಹೆಚ್ಚಿನ ಶಿಕ್ಷೆಗೆ ಪಾತ್ರರಿರುವ ಆರೋಪಿಗಳ ವಿಚಾರಣೆಯು ಯೋಗ್ಯ ರೀತಿಯಲ್ಲಿ ನಡೆಯಬೇಕೆಂದು ತಾಲೂಕಿನಲ್ಲಿಯ ಕೋರ್ಟು ಗಳು ಅವುಗಳನ್ನು ಡಿಸ್ಟ್ರಿಕ್ಟ ಜಜ್ಜನ ಕಡೆಗೆ ಕಳಿಸುವವು. ಗಲ್ಲಿನ ಶಿಕ್ಷೆಯ ವರೆಗೆ ಎಲ್ಲ ಬಗೆಯ ಶಿಕ್ಷೆಗಳನ್ನು ಕೊಡುವ ಅಧಿಕಾರವು ಇವನಿಗಿರುವದು.

**ಶಿಕ್ಷಣ ಖಾತೆ:**— ಜಿಲ್ಲೆಯಲ್ಲಿಯ ಮಕ್ಕಳಿಗೆ ಶಿಕ್ಷಣ ಕೊಡುವ ಕಾರ್ಯ ಜಿಲ್ಲಾ ಸ್ಕೂಲ ಬೋರ್ಡಿನದು. ಈ ಜಿಲ್ಲಾ ಸ್ಕೂಲಬೋರ್ಡಿ ನಲ್ಲಿ ಹದಿನಾರು ಜನ ಸದಸ್ಯರು ಇರುವರು. ಸ್ಕೂಲಬೋರ್ಡಿನ ಆಡ ಳಿತೆ ನಡಿಸುವದಕ್ಕಾಗಿ ಆಡ್ಮಿನಿಸ್ಟ್ರೇಟಿವ್ಹ ಆಫೀಸರ ಎಂಬ ಸರಕಾರದ ಅಧಿಕಾರಿಯು ಇರುವನು.

ಜಿಲ್ಲೆಯೊಳಗಿನ ಪ್ರಾಥಮಿಕ ಮಾಧ್ಯಮಿಕ ಶಾಲೆಗಳ ಮೇಲ್ವಿ ಚಾರಣೆ ಮಾಡುವದಕ್ಕಾಗಿ ಜಿಲ್ಲೆಯ ಸ್ಥಳದಲ್ಲಿ ಎಜ್ಯುಕೇಶನಲ್ ಇನ್ಸ್ಪೆ

ಕ್ಟರ ಎಂಬ ಅಧಿಕಾರಿಯು ಇರುವನು. ಇವನ ಸಹಾಯಕ್ಕೆ ಡೆಪುಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರನು ಮತ್ತು ಅಸಿಸ್ಟಂಟ ಡೆಪುಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರರು ಇರುತ್ತಾರ.

ಈ ಅಧಿಕಾರಿಗಳು ತಮ್ಮ ತಮ್ಮ ಕೆಲಸಗಳನ್ನು ಯೋಗ್ಯ ರೀತಿಯಲ್ಲಿ ಮಾಡಿ ಜನರ ಹಿತವನ್ನು ನೋಡಿಕೊಳ್ಳುವರು. ಇವರು ಮಾಡುವ ಕೆಲಸಗಳು ನಮ್ಮ ಹಿತಕ್ಕಾಗಿಯೇ ಇರುವದರಿಂದ ಇವರ ಕಾರ್ಯದಲ್ಲಿ ಯೋಗ್ಯ ರೀತಿಯಿಂದ ಸಹಕರಿಸುವದು ಪ್ರತಿಯೊಬ್ಬರ ಕರ್ತವ್ಯವಾಗಿರುತ್ತದೆ.

## ಅಭ್ಯಾಸ

1 ತಾಲೂಕಿನ ಮುಖ್ಯ ಅಧಿಕಾರಿಯು ಯಾರು ?

2 ಫೌಜದಾರನ ಕೆಲಸವೇನು ? ಅವನ ಸಹಾಯಕ್ಕೆ ಯಾರು ಯಾರು ಇರುವರು ?

3 ಬಿಟ್ಟ ಸ್ಥಳ ತುಂಬಿ ಪೂರ್ಣ ಮಾಡಿರಿ.
ಕಳವು ಬಡಿದಾಟಗಳನ್ನು ಮಾಡಿದ ಜನರ ಮೇಲೆ ಖಟ್ಲೆ ಹಾಕುವದನ್ನು ....... ........ನು ಮಾಡುವನು. ಕೊಡಕೊಳ್ಳುವ ವ್ಯವಹಾರದಲ್ಲಿ ಬಂದ ನ್ಯಾಯಗಳ ವಿಚಾರಣೆಯನ್ನು ....... ............ ...ನು ಮಾಡುವನು.

4 ಕೆಳಗಿನ ಸಂಗತಿಗಳನ್ನು ಸರಿಪಡಿಸಿ ಬರೆಯಿರಿ.

(i) ಗಲ್ಲಿನ ಶಿಕ್ಷೆಯನ್ನು ಕೊಡುವ ಅಧಿಕಾರವು ತಹಸಿಲದಾರನಿಗೆ ಇರುವದು

(ii) ಫೌಜದಾರರ ಕಚೇರಿಗಳಲ್ಲಿ ಜನರು ವ್ಯವಹಾರಗಳ ನೋಂದಣಿ ಮಾಡುತ್ತಾರ.

(iii) ಎಜ್ಯುಕೇಶನಲ್ ಇನ್‌ಸ್ಪೆಕ್ಟರನು ಸ್ಕೂಲಬೋರ್ಡಿನ ಆಡಳತೆನಾಗಿಸುವನು.

# 9 ಸಂಘ ಸಂಸ್ಥೆಗಳು

ನಮ್ಮ ಜೀವನವನ್ನು ನಡೆಸಲಿಕ್ಕೆ ನಾವು ಎರಡನೆಯವರಿಂದ ಅನೇಕ ರೀತಿಯಲ್ಲಿ ಸಹಾಯ ಪಡೆಯುತ್ತೇವೆ ಅದೇ ರೀತಿಯಲ್ಲಿ ನಾವಾದರೂ ಎರಡನೆಯವರಿಗೆ ಸೇವಾಗುತ್ತೇವೆ.

ಒಬ್ಬನಿಗೆ ತನ್ನ ಹೊಲಗಳನ್ನು ಉತ್ತುಬಿತ್ತಲಿಕ್ಕೆ ಬೇಕಾದ ಒಂದು ಜೋಡಿ ಎತ್ತು ಕೊಳ್ಳಲಿಕ್ಕೆ ಸಾಧ್ಯವಿಲ್ಲವೆಂದು ತಿಳಿಯಿರಿ. ಆಗ ಅವನು ಒಂದು ಎತ್ತನ್ನು ಮಾತ್ರ ತೆಗೆದುಕೊಳ್ಳುತ್ತಾನೆ. ತನ್ನಂತೆಯೇ ಒಂದು ಎತ್ತನ್ನು ಇಟ್ಟುಕೊಂಡವನ ಜೊತೆಗೆ ಮುಯ್ಯ ಕೂಡುತ್ತಾನೆ. ಈ ಜೊತೆ ಎತ್ತುಗಳಿಂದ ಅವರಿಬ್ಬರು ತಮ್ಮ ತಮ್ಮ ಹೊಲಗಳನ್ನು ಉತ್ತು ಬಿತ್ತಿ ಬೆಳೆತೆಗೆದುಕೊಳುತ್ತಾರ. ಇದಕ್ಕೆಯೇ ಸಹಕಾರ ಜೀವನ ಎಂದು ಹೇಳುವರು. ನಮ್ಮ ಹಳ್ಳಿಗಳಲ್ಲಿ ಸಣ್ಣಪ್ರಮಾಣ ದಲ್ಲಿ ಈ ಸಹಕಾರೀ ಜೀವನವು ಎಲ್ಲ ಕಡೆಗೂ ನೋಡಲಿಕ್ಕೆ ದೊರೆಯು ತ್ತದೆ. ಇದೇ ಬಗೆಯಾಗಿ ಹಲವರು ಕೂಡಿದರೆ ಅದು ಒಂದು ಸಂಘ ವೆನಿಸುತ್ತದೆ, ಸಂಸ್ಥೆ ಎನಿಸುತ್ತದೆ. ಇಂತಹ ಹಲವು ಸಂಘ ಸಂಸ್ಥೆಗಳು ನಮ್ಮಲ್ಲಿ ಇರುತ್ತವೆ.

ಹಳ್ಳಿಯ ಒಕ್ಕಲಿಗರಲ್ಲಿ ಬೇಕಾದಾಗ ಕೈಯಲ್ಲಿ ಹಣವಿರುವದಿಲ್ಲ. ಹಣದ ಅವಶ್ಯಕತೆ ಬಿದ್ದಾಗ ಅವರು ಸಾಲ ತೆಗೆಯಬೇಕಾಗುತ್ತದೆ. ಸಾಲ ಕೊಡುವವರಿಗೆ ತೆಗೆದುಕೊಂಡವನು ತಿರುಗಿ ಅದನ್ನು ಮುಟ್ಟಿ ಸುವನೆಂದು ವಿಶ್ವಾಸವಿರಬೇಕಾಗುತ್ತದೆ. ಹೀಗೆ ವಿಶ್ವಾಸವಿರದಿದ್ದರೆ ಸಾಲ ದೊರೆಯುವದಿಲ್ಲ. ಆದ್ದರಿಂದ ಹಳ್ಳಿಯಲ್ಲಿ ಒಕ್ಕಲುತನ ಮಾಡು ವವರು ತಮ್ಮದೊಂದು ಸಂಘವನ್ನು ಮಾಡಿಕೊಂಡು ಪತ್ತು ಬೆಳಿಸಿ ಕೊಳ್ಳುತ್ತಾರೆ. ಆ ಸಂಘದ ಮುಖಾಂತರವಾಗಿ ಹಣವನ್ನು ಪಡೆಯು ತ್ತಾರೆ. ಇಂತಹ ಸಂಘಗಳಿಗೆ 'ಒಕ್ಕಲುತನದ ಪತ್ತು ಬೆಳಿಸುವ ಸಹ

ಕಾರೀ ಸಂಘಗಳು' ಎಂದು ಹೆಸರು. ಇಂತಹ ಸಂಘಗಳು ವಿಜಾಪುರ ಜಿಲ್ಲೆಯಲ್ಲಿ 190 ಊರುಗಳಲ್ಲಿ ಇರುತ್ತವೆ. ಈ ಸಂಘಗಳಿಗೆ ಅವಶ್ಯವಿದ್ದ ಸಾಲವನ್ನು ಕೊಡುವದಕ್ಕೂ ತಿರುಗಿ ಪಡೆಯುವದಕ್ಕೂ ಜಿಲ್ಲೆಯ ಸ್ಥಳದಲ್ಲಿ 'ಜಿಲ್ಲಾ ಮಧ್ಯವರ್ತಿ ಸಹಕಾರೀ ಬ್ಯಾಂಕು' ಎಂಬದು ಇರುತ್ತದೆ.

ಒಕ್ಕಲುತನಕ್ಕೆ ಬೀಜ, ಗೊಬ್ಬರಗಳೂ ಉಪಕರಣ ತಯಾರಿಸಿಕೊಳ್ಳುವದಕ್ಕೆ ಕಬ್ಬಿಣ ಮೊದಲಾದವುಗಳೂ ಬೇಕಾಗುತ್ತವೆ. ಒಬ್ಬೊಬ್ಬನೇ ತನಗೆ ಬೇಕಾದ ಒಳ್ಳೆಯ ಬೀಜ ಗೊಬ್ಬರಗಳನ್ನು ತರಿಸಿಕೊಳ್ಳಲು ಅಸ್ಪದವಿರುವದಿಲ್ಲ ಅವು ಒಳ್ಳೆಯವು ದೊರೆಯುವದಿಲ್ಲ. ಆದುದರಿಂದ ಒಕ್ಕಲುತನ ಮಾಡುವವರು ತಮ್ಮದೊಂದು ಸಂಘವನ್ನು ಮಾಡಿಕೊಂಡರೆ ಆ ಸಂಘದ ಮುಖಾಂತರ ಉತ್ತಮವಾದ ಬೀಜ ಗೊಬ್ಬರಗಳನ್ನೂ ಕಬ್ಬಿಣ ಮೊದಲಾದವನ್ನೂ ಪಡೆಯಲು ಅನುಕೂಲವಾಗುವದು ಸರಕಾರದವರು ಇಂತಹ ಸಂಘಗಳಿಗೆ ಉತ್ತೇಜನ ಕೊಡುತ್ತಿದ್ದಾರೆ. ಈ ಉದ್ದೇಶದಿಂದ ಸ್ಥಾಪಿತವಾದ ಸಂಘಗಳಿಗೆ 'ವಿವಿಧೋದ್ದೇಶ ಸಂಘಗಳು' ಎಂದು ಹೆಸರು. ಇಂತಹ ವಿವಿಧೋದ್ದೇಶ ಸಂಘಗಳು ಈ ಜಿಲ್ಲೆಯಲ್ಲಿ 370 ಇರುತ್ತವೆ. ಇವುಗಳಿಗಾದರೂ ಜಿಲ್ಲಾಮಧ್ಯವರ್ತಿ ಬ್ಯಾಂಕು ಅವಶ್ಯವಿದ್ದ ಹಣವನ್ನು ಪೂರಯಿಸಿ ತಿರುಗಿ ಪಡೆಯುತ್ತದೆ.

ಇದೇ ಬಗೆಯಾಗಿ ಸಂಘಗಳನ್ನು ಸ್ಥಾಪಿಸಿಕೊಂಡು ಹಲವು ಅವಶ್ಯಕತೆಗಳನ್ನು ಪೂರಯಿಸಿಕೊಳ್ಳಲು ಬರುತ್ತದೆ. ಬಡಬಗ್ಗರಿಗೆ ಮನೆ ಕಟ್ಟಿಕೊಳುವದೆಂದರೆ ಶಕ್ಯವಿರುವದಿಲ್ಲ. ಅಂಥವರು ತಮ್ಮದೊಂದು ಸಂಘವನ್ನು ಮಾಡಿಕೊಂಡು ತಮಗೆ ಅವಶ್ಯವಿದ್ದ ಸ್ಥವನ್ನು ಸರಕಾರದಿಂದ ಪಡೆದು ಸಂಘದ ಮುಖಾಂತರ ಸಾಲ ಪಡೆದು ಮನೆ ಕಟ್ಟಿಕೊಳ್ಳಬಹುದು. ಈ ಬಗೆಯಲ್ಲಿ ಮನೆ ಕಟ್ಟಿಕೊಳ್ಳುವ ಸಂಘಗಳು

ವಿಜಾಪುರ ಜಿಲ್ಲೆಯಲ್ಲಿ 35 ಇರುತ್ತವೆ. ಹಲವರು ಕೂಡಿಕೊಂಡು ತಮಗೆ ಅಗತ್ಯವಿರುವ ದಿನ ಬಳಕೆಯ ಸಾಹಿತ್ಯಗಳನ್ನು ಪಡೆಯುವ ಗಿರಾಕಿಗಳ ಸಂಘಗಳನ್ನೂ ಸ್ಥಾಪಿಸಿಕೊಂಡಿದ್ದಾರೆ. ಇಂತಹ ಗಿರಾಕಿಗಳ ಸಂಘಗಳು ಈ ಜಿಲ್ಲೆಯಲ್ಲಿ 12 ಇರುತ್ತವೆ ಪ್ರತಿಯೊಂದು ವೃತ್ತಿಯವರೂ ಇಂತಹ ಸಹಕಾರೀ ಸಂಘಗಳನ್ನು ಸ್ಥಾಪಿಸಿಕೊಳ್ಳುವದು ಶಕ್ಯವಿದೆ. ಹಾಲು ಮಾರುವವರು ತಮ್ಮ ಸಂಘವನ್ನು ಸ್ಥಾಪಿಸಿಕೊಂಡು ಹಾಲು ಮಾರಬಹುದು. ತೋಟಗಾರರು ತಮ್ಮ ಸಂಘವನ್ನು ಸ್ಥಾಪಿಸಿಕೊಂಡು ತೋಟದ ಬೆಳೆಯನ್ನು ಮಾರಬಹುದು; ಹಾಗು ಬೆಳೆ ಮಾಡುವದಕ್ಕೆ ಸಾಲ ಪಡೆಯಬಹುದು ಕೂಲಿಕಾರರೂ ತಮ್ಮ ಸಂಘಗಳನ್ನು ಸ್ಥಾಪಿಸಿಕೊಳ್ಳಬಹುದು. ಈ ಜಿಲ್ಲೆಯಲ್ಲಿ ಇಂತಹ 11 ಕೂಲಿಕಾರರ ಸಂಘಗಳು ಇರುವವು ಕೊಲ್ಹಾರದಲ್ಲಿ ಮೀನುಗಾರಿಕೆಯ ಉದ್ಯೋಗದ ಸಂಘವು ಇರುತ್ತದೆ. ಮುಚಖಂಡಿಯಲ್ಲಿ ಸಂಯುಕ್ತ ಒಕ್ಕಲುತನ ಮಾಡುವ ಸಂಘವು ಇರುತ್ತದೆ.

ಸರಕಾರದವರು ಇಂತಹ ಸಹಕಾರೀ ಸಂಘಗಳನ್ನು ಸ್ಥಾಪಿಸಿಕೊಳ್ಳಲು ಉತ್ತೇಜನ ಕೊಡುತ್ತಿದ್ದಾರೆ. ಸ್ಥಾಪಿತವಾಗುವ ಸಂಘಗಳಿಗೆ ಅವಶ್ಯವಿದ್ದ ಸಹಾಯಗಳನ್ನು ಒದಗಿಸುತ್ತಿದ್ದಾರೆ. ಈ ಸಹಕಾರೀ ಸಂಘಗಳ ಮೇಲ್ವಿಚಾರಣೆಗಾಗಿ ಜಿಲ್ಲೆಯ ಸ್ಥಳವಾದ ವಿಜಾಪುರದಲ್ಲಿ ಅಸಿಸ್ಟಂಟ ರಜಿಸ್ಟ್ರಾರ ಎಂಬ ಅಧಿಕಾರಿಯು ಇರುವನು.

### ಅಭ್ಯಾಸ

1 ಒಕ್ಕಲುತನದ ಪತ್ತು ಬೆಳಿಸುವ ಸಹಕಾರೀ ಸಂಘಗಳಿಂದ ಉಪಯೋಗ ವೇನು ?

2 ವಿವಿಧೋದ್ದೇಶ ಸಂಘಗಳು ತಮಗೆ ಬೇಕಾದ ಹಣವನ್ನು ಎಲ್ಲಿಂದ ಪಡೆಯುತ್ತವೆ?

3 ಸಹಕಾರೀ ಸಂಘಗಳ ಮೇಲ್ವಿಚಾರಣೆಯು ಯಾರಿಂದ ನಡೆಯುತ್ತದೆ?

## 10 ನಕಾಶವಾಚನ

ನಕಾಶವಲ್ಲಿ ಬೇರೆ ಬೇರೆ ತರದ ಗುರುತುಗಳು ಇರುತ್ತವೆ. ಆ ಗುರುತುಗಳ ಸಹಾಯದಿಂದ ನಕಾಶವನ್ನು ಓದಿ ತಿಳಿದುಕೊಳ್ಳಲು ಬರುತ್ತದೆ. ನಕಾಶವಲ್ಲಿ ಬರುವ ಗುರುತುಗಳ ಅರ್ಥವನ್ನು ಕೆಳಗೆ ಕೊಟ್ಟಿರುತ್ತದೆ. ಜಿಲ್ಲೆಯ ನಕಾಶವನ್ನು ನೋಡಿ ಯಾವ ಯಾವ ಊರುಗಳಲ್ಲಿ ಏನೇನು ಇರುತ್ತದೆ ಹೇಳಿರಿ.

| | |
|---|---|
| ಸೀಮೆ | ತಾರ ಆಫೀಸ |
| ಲೈನ ದಾರಿ | ಕೈಗಾರಿಕೆಯ ಸ್ಥಳ |
| ಉಗಿಬಂಡಿಯ ದಾರಿ | ಹಳ್ಳಿ |
| ನದಿ | ದೊಡ್ಡ ಊರು |
| ದಿನ್ನೆ | ಸಂತೆ ನೆರೆಯುವ ಊರು |
| ಗುಡ್ಡ, ಪರ್ವತ | ರೇಲ್ವೆ ಸ್ಟೇಶನ್ |
| ಬನ, ಹಳುವು | ಪ್ರವಾಸಿಕರ ಬಂಗಲೆ |
| ಹೊಲಗಳು | ಉಸುಕಿನ ಬೈಲು |
| ಬಾವಿ | ಕೋಟೆ |
| ಮನೆ | ಪೂಲು |
| ಬಾವಡಿ | ಕಲ್ಲಿನ ಕಣಿ |
| ದೇವಸ್ಥಾನ | ಹಣ್ಣಿನ ತೋಟ |
| ಚರ್ಚ್ | ಬಂದರ |
| ದವಾಖಾನೆ | ದೀಪಸ್ತಂಭ |
| ಪೇಟೆ | ಮೀನ ಹಿಡಿಯುವ ಸ್ಥಳ |
| ಗಿರಣಿ | ಉಪ್ಪಿನ ಮಾಳ |
| ಪೋಸ್ಟ ಆಫೀಸ | ಉತ್ತರದಿಕ್ಸೂಚಿ |



---


ಈ ಪುಸ್ತಕವನ್ನು ಬೆಳಗಾವಿಯಲ್ಲಿ ಕೆ. ಜಿ. ಜೋಶಿ ಇವರು

ಭುವನೇಶ್ವರಿ ಮುದ್ರಣಾಲಯದಲ್ಲಿ ಮುದ್ರಿಸಿದರು.

ಮತ್ತು

ಪ್ರ. ಗೋ. ಕುಲಕರಣಿ ಇವರು ಫುಲಬಾಗಗಲ್ಲಿ ಮನೆಯ ನಂ. ೨೪೪ ಬೆಳಗಾವಿ.

೮೩

ಇಲ್ಲಿ ಪ್ರಸಿದ್ಧಿಸಿದರು.

ಮುತ್ತಗಿ:— ಇಲ್ಲಿ ಹಿಂದಿನ ಕಾಲದ ೯ ಗುಡಿಗಳುಂಟು ಗೌರೀ ಭಾವಿಯೆಂಬ ಹೆಸರಿನ ಒಂದು ದೊಡ್ಡ ಭಾವಿ ಅದೆ.

ಹೆಬ್ಬಾಳ:— ಇಲ್ಲಿ ಜಕ್ಕಣಾಚಾರ್ಯರ ಕಾಲಕ್ಕೆ ಕಟ್ಟಿಸಿದ ಶ್ರೀ ಮಲ್ಲಿಕಾರ್ಜುನ ದೇವಾಲಯು ಅದೆ.

ಮನಗೂಳಿ:— ಇಲ್ಲಿಯು ಹಣಮಂತ ದೇವರ ಗುಡಿಯಲ್ಲಿ ಹಿಂದಿನ ಕಾಲದ ಶಿಲಾ ಲಿಪಿಗಳು ಅವೆ. ಬಸವೇಶ್ವರ ದೇವಾಲಯವು ಪ್ರಸಿದ್ಧವಿದ್ದು ಪ್ರತಿವರ್ಷ ಜಾತ್ರೆ ಆಗುತ್ತದೆ. ಈ ಊರು ಒಕ್ಕಲುತನದ ಉದ್ಯೋಗಕ್ಕೆ ಪ್ರಸಿದ್ಧವಾದದ್ದು.

ಆಲಮಟ್ಟಿ:— ಕೃಷ್ಣಾ ನದಿಯ ದಂಡೆಯ ಮೇಲೆ ಸ್ಟೇಶನ ಅದೆ. ಬಾಗೇವಾಡಿ, ಮುದ್ದೇಬಿಹಾಳ ಊರುಗಳಿಗೆ ಬರ ಹೋಗುವ ಸರಕುಗಳು ಈ ಸ್ಟೇಶನ ಮುಖಾಂತರ ಬರುವವಾದ್ದರಿಂದ ಈ ಸ್ಟೇಶನವು ದಿನ ದಿನಕ್ಕೆ ಬೆಳೆಯುತ್ತ ನಡೆದದೆ.

ಉಕ್ಕಲಿ:— ಈ ಊರಲ್ಲಿಯ ಎರೆ ಭೂಮಿಯು ಬೆಳೆಯುಳ್ಳದ್ದು. ಇಲ್ಲಿ ಒಕ್ಕಲತನದ ಉದ್ಯೋಗವು ಚನ್ನಾಗಿ ನಡೆಯುತ್ತದೆ.

## ೧೮. ಮುದ್ದೇಬಿಹಾಳ ತಾಲೂಕು.

ಮೇರೆಗಳು:— (ನಕಾಶ ನೋಡಿರಿ.) ಉತ್ತರಕ್ಕೆ ಸಿಂದಗಿ ತಾಲೂಕು. ಪೂರ್ವಕ್ಕೆ ಹೈದರಾಬಾದ ರಾಜ್ಯ. ಪಶ್ಚಿಮಕ್ಕೆ ಬಾಗೇವಾಡಿ ತಾಲೂಕು. ದಕ್ಷಿಣಕ್ಕೆ ಕೃಷ್ಣಾ ನದಿಯು. ಅವರ ಆಚೆಗೆ ಬಾಗಲಕೋಟೆ ಮತ್ತು ಹುನಗುಂದ ತಾಲೂಕುಗಳು.

### ಪ್ರಾಕೃತಿಕ ಸಂಗತಿಗಳು.

ಭೂಮಿ-ಬೆಳೆ:— ಕೃಷ್ಣಾ, ಡೋಣೀ ತೀರದ ಎರೆ ಭೂಮಿಗಳು ಬೆಳೆಯುಳ್ಳವು ಅವೆ. ಇಲ್ಲಿ ಹತ್ತಿ, ಗೋದಿ, ಜೋಳ ಚನ್ನಾಗಿ ಬೆಳೆಯು

ತ್ತವೆ. ಉಳಿದ ಕಡೆಗೆ ಗರಸು ಭೂಮಿಗಳು ಇದ್ದು, ಅವು ಬೆಳೆಯುಳ್ಳವು ಅಲ್ಲ. ಈ ತಾಲೂಕಿನಲ್ಲಿ ಗುಡ್ಡಗಳು ಇಲ್ಲ.

ಹವೆಃ— ಇಲ್ಲಿಯ ಹವೆಯು ಉಷ್ಣವಾದದ್ದು.

ಹೊಳೆ-ಹಳ್ಳಗಳುಃ—ಈ ತಾಲೂಕಿನ ದಕ್ಷಿಣ ಮೇರೆಗುಂಟ ಕೃಷ್ಣಾ ನದಿಯು ಹರಿದಿದೆ. ಉತ್ತರ ಕಡೆಯಲ್ಲಿ ಡೋಣಿ ಹಳ್ಳವು ಅದೆ.

## ಮಾರ್ಗಗಳು.

ಈ ತಾಲೂಕಿನಲ್ಲಿ ಉಗಿಬಂಡಿಯ ಮಾರ್ಗವು ಹಾಯ್ದಿರುವದಿಲ್ಲ. ಮುದ್ದೇಬಿಹಾಳದಿಂದ ಲೈನ ಮಾರ್ಗಗಳು ಐದು ಕಡೆಗೆ ಹೋಗಿವೆ. ೧. ಬಿದರಕುಂದಿ, ಢವಳಗಿ ಮೇಲಿಂದ ಹೂವಿನಹಿಪ್ಪರಗಿಗೆ. ೨. ತಾಳೀಕೋಟಿಗೆ: ೩. ನಾಲತವಾಡಕ್ಕೆ. ೪. ತಂಗಡಿಗಿಗೆ. ೫. ಚಿಮ್ಮಲಗಿಗೆ. ಇವುಗಳ ಹೊರ್ತಾಗಿ ತಾಳೀಕೋಟೆಯಿಂದ ೧. ಸಾಲವಾಡಗಿ. ೨. ತುಂಬಿಗಿ ೩. ಹೂವಿನಹಿಪ್ಪರಗಿ ಹೀಗೆ ಮೂರು ಊರುಗಳಿಗೆ ಮಾರ್ಗಗಳು ಹೋಗಿವೆ.

ದೊಡ್ಡ ಊರುಗಳು:— ಮುದ್ದೇಬಿಹಾಳ, ನಾಲತವಾಡ, ತಾಳೀಕೋಟೆ, ಬಸರಕೋಡ, ಢವಳಗಿ, ಹಿರೂರ, ಕೋಳೂರ, ಕೊಣ್ಣೂರ, ಕುಂಟೋಜಿ, ಸಾಲವಾಡಗಿ, ತಮದಡ್ಡಿ, ತಂಗಡಗಿ, ಬಳಗಾನೂರ, ಬಂಟನೂರ, ಬಿದರಕುಂದಿ, ಇಂಗಳಗೇರಿ, ಕಾಳಗಿ, ಪಡೇಕನೂರ, ಕರೂರ, ತುಂಬಿಗಿ, ಯರ್ಜೇರಿ.

ಪೋಸ್ಟ ಇದ್ದ ಊರುಗಳುಃ—ತಾಳೀಕೋಟೆ, ಹೂವಿನಹಿಪ್ಪರಗಿ, ಕೊಣ್ಣೂರ, ಸಾಲವಾಡಿಗಿ, ವಡವಡಿಗಿ, ಆಲಮಟ್ಟಿ, ಬಸರಕೋಡ. ಚಿಮ್ಮಲಗಿ, ಢವಳಗಿ, ನಾಲತವಾಡ, ತಂಗಡಗಿ.

ತಾರ ಆಫೀಸ ಇದ್ದ ಊರುಃ— ಮುದ್ದೇಬಿಹಾಳ, ತಾಳೀಕೋಟೆ

## ಊರುಗಳ ವಿಶೇಷ ವರ್ಣನೆ

ಮುದ್ದೇಬಿಹಾಳ:— ವಿಜಾಪುರದಿಂದ ಆಗ್ನೇಯಕ್ಕೆ ೪೫ ಮೈಲಿನ ಮೇಲೆ ಅದೆ. ತಾಲೂಕಿನ ಮುಖ್ಯ ಸ್ಥಳವಾದ್ದರಿಂದ ಇಲ್ಲಿ ಮಾಮಲೇದಾರ

ಕಚೇರಿ ಮತ್ತು ಫೌಜದಾರ ಕಚೇರಿ ಅವೆ. ಇಲ್ಲಿ ಮುನಸುಫ್ ಕೋರ್ಟ್ ಅದೆ. ಸರಕಾರಿ ದವಾಖಾನೆಗಳು ಅವೆ. ಈಗ ಇಲ್ಲಿ ಇಂಗ್ಲೀಷ ಶಾಲೆಯು ಆಗಿದೆ. ಗುರುವಾರ ಈ ಊರ ಸಂತೆ ಆಗುತ್ತದೆ. ವ್ಯಾಪಾರವು ತಕ್ಕ ಮಟ್ಟಿಗೆ ಅದೆ.

**ನಾಲತವಾಡ:**— ಈ ಊರಲ್ಲಿ ಹಿಂದಕ್ಕೆ ವೀರಯ್ಯನವರು ಎಂಬ ಶಿವಶರಣರು ಆಗಿಹೋಗಿದ್ದಾರೆ. ಇವರು ಅನೇಕ ಪವಾಡಗಳನ್ನು ಮಾಡಿದರೆಂದು ಹೇಳುತ್ತಾರೆ. ಇಲ್ಲಿ ಕಾಳುಕಡಿಯ ವ್ಯಾಪಾರವೂ ಹೆಚ್ಚು.

**ತಾಳೀಕೋಟಿ:**— ಈ ಊರು ಹೈದರಾಬಾದ ರಾಜ್ಯ ಮತ್ತು ಮುಂಬಯಿ ರಾಜ್ಯದ ನಡುವಿನ ಸೀಮೆಯಲ್ಲಿ ಇದ್ದು, ಕಾಳುಕಡಿಯ ವ್ಯಾಪಾರವು ಹೆಚ್ಚು ಆಗುತ್ತದೆ. ಇಲ್ಲಿ ಒಂದು ಹಾಯಸ್ಕೂಲ ಅದೆ. ಬಾಳಾಜಿ ಬಾಜಿರಾವ ಪೇಶ್ವೆಯು ಈ ಊರನ್ನು ತನ್ನ ಬೀಗನಾದ ಆನಂದರಾವ ರಾಸ್ತೆ ಎಂಬವನಿಗೆ ಸರಂಜಾಮಿಯಾಗಿ ಕೊಟ್ಟಿದ್ದನು. ಅವನು ಕಟ್ಟಿಸಿದ ಕೋಟೆಯು ಇನ್ನೂ ಅದೆ. ಈ ಊರ ಸುತ್ತು ಮುತ್ತು ಕಲ್ಲುಗಳು ಹೆಚ್ಚು ಸಿಗುವವರಿಂದ ಇಲ್ಲಿ ಕಲ್ಲಿನ ಕಟ್ಟಡಗಳು ವಿಶೇಷವಾಗಿ ಅವೆ. ಪೇಟೆಯನ್ನು ಶಿಸ್ತಿನಿಂದ ಕಟ್ಟಿಸಿದ್ದಾರೆ. ಈ ಊರಿಂದ ತುಪ್ಪವು ವಿಜಾಪುರ, ಪುಣೆ, ಮುಂಬಯಿ, ಪಂಢರಪುರ ಮೊದಲಾದ ಊರುಗಳಿಗೆ ಕಳಿಸಲ್ಪಡುತ್ತದೆ. ಫರಸೀ ಮಾಡುವ ಕಲ್ಲುಗಳ ವ್ಯಾಪಾರವು ಹೆಚ್ಚು ಆಗುತ್ತದೆ. ಸೋಮವಾರ ದಿವಸ ಈ ಊರ ಸಂತೆ ಆಗುತ್ತದೆ. ಇಲ್ಲಿ ಜಾಜಮು ಮತ್ತು ಕರಾಳಿ ಹಚ್ಚಡಗಳು ತಯಾರ ಆಗುತ್ತವೆ. ಶ್ರೀ ರಾಸ್ತೆಯವರ ವಾಡೆಯ ಸುತ್ತಲೂ ಕೋಟೆ ಅದೆ.

**ಯಲಗೂರ:**— ಈ ಊರಲ್ಲಿ ಹಣಮಂತದೇವರ ಗುಡಿಯು ಪ್ರಸಿದ್ಧವಿದೆ. ಇಲ್ಲಿ ಸುತ್ತುಮುತ್ತಲಿನ ಏಳು ಹಳ್ಳಿಗಳಿಗೆ ಇವನೊಬ್ಬನೇ ದೇವರು ಇದ್ದುದರಿಂದ ಇವನಿಗೆ ಏಳೂರಪ್ಪನೆಂದು ಅನ್ನುತ್ತಾರೆ. ಏಳೂರಪ್ಪ ಅನ್ನುವ ಶಬ್ದವೇ ಎಲಗೂರಪ್ಪ ಎಂದಾಗಿದೆ. ಪ್ರತಿವರ್ಷ ಜಾತ್ರೆ ಆಗುತ್ತದೆ.

**ಕುಂಟೋಜಿ:**— ಇಲ್ಲಿಯ ಬಸವೇಶ್ವರ ದೇವಾಲಯವು ಪ್ರಸಿದ್ಧವಿದೆ. ಪ್ರತಿವರ್ಷ ಜಾತ್ರೆ ಆಗುತ್ತದೆ.

ತಂಗಡಗಿ:— ಇದು ಕೃಷ್ಣಾ ನದಿಯ ದಂಡೆಯ ಮೇಲಿನ ಊರು. ಬಸವೇಶ್ವರರು ಕಲ್ಯಾಣವನ್ನು ಬಿಟ್ಟು ಬರುವಾಗ್ಗೆ ನೀಲಮ್ಮನವರೂ ಬಂದು ಈ ಊರಲ್ಲಿ ಉಳಿದಳು. ಬಸವೇಶ್ವರರು ಸಂಗಮದಲ್ಲಿ ಐಕ್ಯರಾದ ಸುದ್ದಿಯನು ಕೇಳಿ ಇವರೂ ಇಲ್ಲಿಯೇ ಐಕ್ಯರಾದರು. ನದಿಯ ದಂಡೆಯ ಮೇಲೆ ನೀಲಮ್ಮನ ಗುಡಿಯು ಅದೆ. ಈ ಊರಲ್ಲಿ ಚರಲಿಂಗಪ್ಪ ಎಂಬ ಸತ್ಪುರುಷರು ಆಗಿಹೋಗಿದ್ದಾರೆ. ಇಲ್ಲಿ ಪ್ರತಿವರ್ಷ ಶ್ರಾವಣ ಮಾಸದಲ್ಲಿ ಊರ ಹತ್ತಿರ ನಡುಗಡ್ಡೆಯಲ್ಲಿ ಚರಲಿಂಗಪ್ಪನ ಪ್ರಸ್ತವು ನಡೆಯುವದು. ಆಗ ಸಾವಿರಾರು ಬಡಜನರಿಗೆ ಅನ್ನ ಸಂತರ್ಪಣೆಯ ಏರ್ಪಾಟ ಆಗುತ್ತದೆ.

**ಬಸರಕೋಡ:**— ಇಲ್ಲಿ ಪವಾಡ ಬಸಪ್ಪ ಎಂಬ ಶರಣರು ಆಗಿಹೋಗಿದ್ದಾರೆ. ಇವರು ಇಲ್ಲಿಯೇ ಐಕ್ಯರಾಗಿದ್ದು, ಸಮಾಧಿಯ ಸ್ಥಳದಲ್ಲಿ ಗದ್ದುಗೆಯನ್ನು ಕಟ್ಟಿಸಿದ್ದಾರೆ. ಪ್ರತಿವರ್ಷ ಇಲ್ಲಿ ಜಾತ್ರೆ ಆಗುತ್ತದೆ. ಇವರು ಅನೇಕ ಪವಾಡಗಳನ್ನು ಮಾಡಿದರೆಂದು ಹೇಳುತ್ತಾರೆ.

---

## ೧೯. ಹುನಗುಂದ ತಾಲೂಕು.

**ಮೇರೆಗಳು:**— ಉತ್ತರಕ್ಕೆ ಕೃಷ್ಣಾ ನದಿಯು. ಅದರ ಆಚೆಗೆ ಮುದ್ದೇಬಿಹಾಳ ತಾಲೂಕು. ಪೂರ್ವಕ್ಕೆ ಮತ್ತು ದಕ್ಷಿಣಕ್ಕೆ ನೈಜಾಮ ರಾಜ್ಯ. ಪಶ್ಚಿಮಕ್ಕೆ ಬದಾಮಿ ಮತ್ತು ಬಾಗಲಕೋಟ ತಾಲೂಕುಗಳು.

### ಪ್ರಾಕೃತಿಕ ಸಂಗತಿಗಳು

**ಗುಡ್ಡಗಳು:**— ಪಶ್ಚಿಮ ಮತ್ತು ದಕ್ಷಿಣ ಭಾಗಗಳಲ್ಲಿ ಕೆಲವು ಗುಡ್ಡಗಳು ಉಂಟು.

**ಭೂಮಿ-ಬೆಳೆ:**—ಈ ತಾಲೂಕಿನ ಭೂಮಿಯು ಹೆಚ್ಚಾಗಿ ಎರೆ ನೆಲವು ಇದ್ದು, ಇಲ್ಲಿಯ ಮುಖ್ಯ ಬೆಳೆಯು ಹತ್ತಿಯು. ಜೋಳ, ಗೋದಿಯೂ ಬೆಳೆಯುತ್ತವೆ. ಕೃಷ್ಣಾ ನದಿಯ ದಂಡೆಗುಂಟ ಇರುವ ಭೂಮಿಯು ಬಹಳ ಬೆಳೆಯುಳ್ಳದ್ದು ಅದೆ.

**ಹವೆ:**— ಉಷ್ಣವಾದದ್ದು ಮತ್ತು ಆರೋಗ್ಯಕರವಾದದ್ದು.

**ಹೊಳೆ ಹಳ್ಳಗಳು:**— ಕೃಷ್ಣಾ ಮತ್ತು ಮಲಪ್ರಭಾ ನದಿಗಳು ಹರಿದಿವೆ. ಈ ಎರಡೂ ನದಿಗಳ ಸಂಗಮವು ಇದೇ ತಾಲೂಕಿನಲ್ಲಿ ಆಗಿದೆ. ಇದಕ್ಕೆ ಕಪ್ಪಡಿ ಸಂಗಮ ಅನ್ನುತ್ತಾರೆ.

## ಮಾರ್ಗಗಳು

ಈ ತಾಲೂಕಿನಲ್ಲಿ ಉಗಿಬಂಡಿಯ ಮಾರ್ಗವು ಹಾಯ್ದಿರುವದಿಲ್ಲ. ಲೈನ ಮಾರ್ಗಗಳು ಹುನಗುಂದದಿಂದ ಮೂರು ಕಡೆಗೆ ಹೋಗಿರುತ್ತವೆ. ೧. ಇಳಕಲ್ಲಕ್ಕೆ. ೨. ದನ್ನೂರ ಮೇಲಿಂದ ಸಂಗಮಕ್ಕೆ. ೩. ಅಮೀನಗಡ, ಕಮತಗಿ, ಶಿರೂರ ಮೇಲಿಂದ ಬಾಗಲಕೋಟೆಕ್ಕೆ. ಅಮೀನಗಡದಿಂದ ಒಂದು ಶಾಖೆಯು ಗುಡೂರಿಗೆ ಹೋಗಿದೆ. ಸಂಗಮದಿಂದ ಬೇವೂರಕ್ಕೆ ಒಂದು ಮಾರ್ಗವಿದೆ.

**ದೊಡ್ಡ ಊರುಗಳು:**— ಹುನಗುಂದ, ಇಳಕಲ್ಲ, ಕಮತಗಿ, ಸೂಳಿಭಾಂವಿ ಐಹೊಳಿ, ಅಮರಾವತಿ, ಚಿತ್ತರಗಿ, ಗಂಜಿಹಾಳ, ಗುಡೂರ, ಕಂದಗಲ್ಲ, ಕರಡಿ, ಕೆಲೂರ, ಕೋಡಿಹಾಳ, ನಂದವಾಡಗಿ, ಸಂಗಮ, ದನ್ನೂರ.

**ಪೋಸ್ಟ ಇದ್ದ ಊರುಗಳು:** — ಅಮಿನಗಡ, ಗುಡೂರ, ಸೂಳಿಭಾಂವಿ, ಇಳಕಲ್ಲ, ಕಂದಗಲ್ಲ, ಕರಡಿ, ನಂದವಾಡಗಿ, ದನ್ನೂರ, ಗಂಜಿಹಾಳ, ಸಂಗಮ.

**ತಾರ ಆಫೀಸ ಇದ್ದ ಊರು:** - ಹುನಗುಂದ, ಅಮಿನಗಡ, ಇಳಕಲ್ಲ.

## ಊರುಗಳ ವಿಶೇಷ ವರ್ಣನೆ

**ಹುನಗುಂದ:**—ವಿಜಾಪುರದಿಂದ ಆಗ್ನೇಯಕ್ಕೆ ೮೫ ಮೈಲಿನ ಮೇಲೆ ಅದೆ. ತಾಲೂಕಿನ ಮುಖ್ಯ ಸ್ಥಳವಾದ್ದರಿಂದ ಇಲ್ಲಿ ಮಾಮಲೇದಾರ ಮತ್ತು ಫೌಜದಾರ ಕಚೇರಿಗಳು ಅವೆ. ರೆಸಿಡೆಂಟ ಮ್ಯಾಜಿಸ್ಟ್ರೇಟ ಕೋರ್ಟ ಮತ್ತು

ಸರಕಾರಿ ದವಾಖಾನೆಗಳು ಅವೆ. ಶನಿವಾರ ಈ ಊರ ಸಂತೆ ಆಗುವದು. ಈ ಊರಲ್ಲಿ ಹತ್ತಿಯ ವ್ಯಾಪಾರವು ಹೆಚ್ಚು. ಇಲ್ಲಿ ಒಂದು ಹಾಯಸ್ಕೂಲ ಇರುತ್ತದೆ.

**ಇಳಕಲ್ಲ:**— ಈ ಊರು ಸೀರೆಗಳ ವ್ಯಾಪಾರಕ್ಕಾಗಿ ಬಹಳ ಪ್ರಸಿದ್ಧ ವಾಗಿದೆ. ಇಲ್ಲಿಯ ನೀರಿನ ಗುಣದಿಂದ ಸೀರೆಗಳ ಬಣ್ಣವು ಬಹಳ ಪಕ್ಕಾ ಇರುತ್ತದೆ. ಅದರಿಂದ ಇಲ್ಲಿಯ ಸೀರೆಗಳು ಬಹಳ ಕಡೆಗೆ ಮಾರಲಿಕ್ಕೆ ಹೋಗುತ್ತವೆ. ಇಲ್ಲಿ ನೇಯುವ ಉದ್ಯೋಗವು ಬಹಳ ದೊಡ್ಡ ಪ್ರಮಾಣ ದಿಂದ ಅದೆ. ಇಲ್ಲಿಯ ಮಹಾಂತ ಸ್ವಾಮಿಗಳ ಮಠವು ಪ್ರಸಿದ್ಧವಾದದ್ದು ಅದೆ. ಈ ಊರಿಗೆ ಮುನ್ಸಿಪಾಲಿಟಿ ಅದೆ. ಗುರುವಾರ ಈ ಊರ ಸಂತೆ ಆಗುತ್ತದೆ.

**ಐಹೊಳಿ:**—ಇಲ್ಲಿಯ ರಾಮಲಿಂಗನ ಗುಡಿಯು ಬಹಳ ಪುರಾತನ ಕಾಲದ್ದು ಅದೆ. ಗುಡಿಯ ಕಂಬಗಳಲ್ಲಿಯ ಕೆತ್ತಿಗೆಯ ಕೆಲಸವು ಹಿಂದಿನ



ರಾಮಲಿಂಗ ದೇವಾಲಯ

ಜನರ ಕೌಶಲ್ಯವನ್ನು ತೋರಿಸುತ್ತದೆ. ಊರ ಹತ್ತರ ಗುಡ್ಡದಲ್ಲಿ ಕಲ್ಲೊಳಗೆ ಕೊರೆದ ಎರಡು ಬಸ್ತಿಗಳು ಅವೆ. ಊರಿಗೆ ಸಮೀಪದಲ್ಲಿ ಗುಡ್ಡದಮೇಲೆ

ಮೋಲುಗುಂಡಿ ಎಂಬ ದೇವಾಲಯವು ಅದೆ. ಇಲ್ಲಿ ಒಂದು ಶಿಲಾಲಿಪಿ ಅದೆ. ಇವಲ್ಲದೆ ಈ ಊರಲ್ಲಿ ಇನ್ನೂ ಕೆಲವು ಗುಡಿಗಳು ಅವೆ. ಊರ ಸುತ್ತಲು ಅನೇಕ ಲಿಂಗ ಮೂರ್ತಿಗಳು ಅವೆ. ಪುರಾತನ ಕಾಲದಲಿ ಇದೊಂದು ಪ್ರಸಿದ್ಧವಾದ ಕ್ಷೇತ್ರವು ಇರಬೇಕೆಂದು ಜನರ ತಿಳುವಳಿಕೆ. ಇದು ಐತಿಹಾಸಿಕ ಪ್ರಸಿದ್ಧ ಸ್ಥಳವೆಂದು ಇದನ್ನು ನೋಡಲಿಕ್ಕೆ ಬಹಳ ದೂರ ದೂರಿನ ಜನರು ಇಲ್ಲಿಗೆ ಬರುತ್ತಾರೆ.

**ಕರಡಿ:**— ಈ ಊರಲ್ಲಿ ಬಸವೇಶ್ವರ ದೇವಾಲಯುವಿದ್ದು, ಪ್ರತಿವರ್ಷ ಜಾತ್ರೆ ಆಗುತ್ತದೆ. ಬಸವೇಶ್ವರ ಮೂರ್ತಿಯು ಬಹಳ ಭವ್ಯವಾದದ್ದು ಅದೆ.

**ನಂದವಾಡಿಗಿ:**— ಇಲ್ಲಿ ಒಂದು ನಾರಾಯಣ ದೇವರ ಗುಡಿ ಅದೆ. ಸೋಮೇಶ್ವರ ದೇವರ ಗುಡಿಯೂ ದೊಡ್ಡದಿದೆ. ಈ ಗುಡಿಗಳಲ್ಲಿ ಶಿಲಾ ಲಿಪಿಗಳು ಅವೆ.

**ಸಂಗಮ:**— ಕೃಷ್ಣಾ, ಮಲಪ್ರಭಾ ನದಿಗಳ ಸಂಗಮ ಸ್ಥಳದಲ್ಲಿ ಸಂಗಮೇಶ್ವರ ದೇವಾಲಯವು ಪ್ರಸಿದ್ಧವಿದೆ. ಪ್ರತಿವರ್ಷ ಚೈತ್ರ ಶುದ್ಧ ಪಂಚಮಿಗೆ ಈ ದೇವರ ಜಾತ್ರೆ ಆಗುತ್ತದೆ. ಜಾತ್ರೆಗೆ ಬಹಳ ದೂರಿನಿಂದ ಜನರು ಬರುತ್ತಾರೆ. ವೀರಶೈವ ಸಮಾಜ ಸುಧಾರಕನಾದ ಬಸವೇಶ್ವರನು ಇಲ್ಲಿಯೇ ಐಕ್ಯನಾದ್ದರಿಂದ ಇದು ವೀರಶೈವರಿಗೆ ಬಹಳ ಪವಿತ್ರ ಸ್ಥಾನ ವಾಗಿರುವದು.

**ಗುಡೂರ:**— ಇಲ್ಲಿ ಕಾಜಿನ ಬಳಿಗಳು ತಯಾರಾಗುತ್ತವೆ. ತಾಮ್ರ ಹಿತ್ತಾಳಿಯ ಪಾತ್ರೆಗಳನ್ನೂ ಇಲ್ಲಿ ಮಾಡುತ್ತಾರೆ. ಖಣಗಳನ್ನು ನೇಯುವ ಉದ್ಯೋಗವು ಇಲ್ಲಿ ಹೆಚ್ಚು.

**ಕಮತಗಿ:**— ಈ ಊರಲ್ಲಿ ನೇಕಾರಿಕೆಯ ಉದ್ಯೋಗವು ಹೆಚ್ಚಾಗಿ ನಡೆಯುತ್ತದೆ. ಇಲ್ಲಿ ಪ್ರತಿವರ್ಷ ಹುಚ್ಚಪ್ಪಯ್ಯನ ಜಾತ್ರೆಯು ಆಗುತ್ತದೆ.

## ೨೦. ಬಾಗಲಕೋಟೆ ತಾಲೂಕು.

ಮೇರೆಗಳು:—(ನಕಾಶ ನೋಡಿರಿ) ಉತ್ತರಕ್ಕೆ ವಿಜಾಪುರ ಮತ್ತು ಬಾಗೇವಾಡಿ ತಾಲೂಕುಗಳು. ಪೂರ್ವಕ್ಕೆ ಹುನಗುಂದ ತಾಲೂಕು. ದಕ್ಷಿಣಕ್ಕೆ ಬದಾಮಿ ತಾಲೂಕು. ಪಶ್ಚಿಮಕ್ಕೆ ಮುಧೋಳ ತಾಲೂಕು.

### ಪ್ರಾಕೃತಿಕ ಸಂಗತಿಗಳು.

ಗುಡ್ಡಗಳು:— ಘಟಪ್ರಭಾ ನದಿಯ ದಂಡೆಯಗುಂಟ ಕೆಲವು ಗುಡ್ಡಗಳು ಅವೆ. ಬೀಳಗಿ ಸುತ್ತುಮುತ್ತು ಹೆಚ್ಚು ಗುಡ್ಡಗಳು ಅವೆ. ಉಳಿದ ಕಡೆಗೆಲ್ಲ ಬೈಲು ಪ್ರದೇಶವಿದೆ.

ಭೂಮಿ-ಬೆಳೆ: ಕೃಷ್ಣಾ ನದಿಯ ದಂಡೆಗುಂಟ ಇರುವ ಎರೆ ಭೂಮಿಯು ಬಹಳ ಬೆಳೆಯುಳ್ಳದ್ದು. ಇಲ್ಲಿ ಹತ್ತಿ, ಗೋದಿ, ಜೋಳ ಬೆಳೆಯುತ್ತಾರೆ. ಗುಡ್ಡಗಳ ನೆರೆಯಲ್ಲಿ ಮಸಾಲಿ ಭೂಮಿಯು ಇದ್ದು, ಅಲ್ಲಿ ಸೇಂಗಾ ಮತ್ತು ಮುಂಗಾರಿ ಧಾನ್ಯಗಳನ್ನು ಬೆಳೆಯುತ್ತಾರೆ.

ಹವೆ:— ಉಷ್ಣವಾದದ್ದು ನದಿಯ ದಂಡೆಯಲ್ಲಿಯ ಹವೆಯು ಆರೋಗ್ಯಕರವಾದದ್ದು.

ಹೊಳೆ-ಹಳ್ಳಗಳು:— ಕೃಷ್ಣಾ ನದಿಯು ಈ ತಾಲೂಕಿನ ಉತ್ತರ ಮೇರೆಗುಂಟ ಹರಿದಿದೆ. ಘಟಪ್ರಭಾ ನದಿಯು ತಾಲೂಕಿನ ಮಧ್ಯದಲ್ಲಿ ಹಾಯ್ದು ಕೃಷ್ಣಾ ನದಿಗೆ ಕೂಡಿದೆ.

### ಮಾರ್ಗಗಳು.

ಉಗಿಬಂಡಿಯ ಮಾರ್ಗ:—ರೇಲ್ವೆ ಮಾರ್ಗವು ಈ ತಾಲೂಕಿನಲ್ಲಿ ಹಾಯ್ದಿದ್ದು ಬಾಗಲಕೋಟೆ, ಆಲಮಟ್ಟಿ, ಸೀತಿಮನಿ, ಸ್ಟೇಶನುಗಳು ಅವೆ.

ಲೈನ ಮಾರ್ಗಗಳು:— ಈ ಊರಿಂದ ಲೈನ ಮಾರ್ಗಗಳು ಮೂರು ಕಡೆಗೆ ಹೋಗಿರುತ್ತವೆ. ೧. ಶಿರೂರ, ಅಮೀನಗಡ ಮೇಲಿಂದ ಹುನಗುಂದಕ್ಕೆ ೨. ಹಳ್ಳೂರ ಮೇಲಿಂದ ಬೀಳೂರಿಗೆ. ೩. ಬೀಳಗಿ, ಗಲಗಲಿ ಮೇಲಿಂದ

ಮುಧೋಳಕ್ಕೆ. ಇವಲ್ಲದೆ ಬೆಳಗಾಂವ-ಬಾಗಲಕೋಟೆ-ಬಳ್ಳಾರಿ ಮಾರ್ಗ ಮತ್ತು ಹುಬ್ಬಳ್ಳಿ-ಸೊಲಾಪುರ ಮಾರ್ಗ ಇವು ಈ ತಾಲೂಕಿನಲಿ ಹಾಯುತ್ತವೆ.

**ದೊಡ್ಡ ಊರುಗಳು:—** ಬಾಗಲಕೋಟೆ, ಶಿರೂರ, ಕಲಾದಗಿ' ಬೇವೂರು, ಹಳ್ಳೂರ, ಮುರನಾಳ, ಖಜ್ಜಡೋಣಿ, ತುಳಸಿಗೇರಿ, ಅಳವಂಡಿ, ಅರಕೇರಿ, ಬೀಳಗಿ, ಗಲಗಲಿ, ಗಿರಿಸಾಗರ, ಹೆರಕಲ್ಲ, ಜಾನಮಟ್ಟಿ, ಕುಂದರಗಿ, ಸಿದ್ದಾಪುರ, ಸುನಗ, ಯಡಹಳ್ಳಿ.

**ಪೋಷ್ಟ ಇದ್ದ ಊರುಗಳು:—** ಬಾಗಲಕೋಟೆ, ಅನಗವಾಡಿ, ಅರಕೇರಿ, ಬೇವೂರ, ಭಗವತಿ, ಬೀಳಗಿ, ಗಲಗಲಿ, ಕಲಾದಗಿ, ಕುಂದರಗಿ, ಶಿರೂರ, ಸೀತಿಮನಿ ಕಡ್ಲಿಮಟ್ಟಿ, ಸುನಗ, ಜಂಜಟಗಿ.

**ತಾರ ಅಫೀಸ ಇದ್ದ ಊರು:—** ಬಾಗಲಕೋಟೆ, ಕಲಾದಗಿ.

## ಊರುಗಳ ವಿಶೇಷ ವರ್ಣನೆ.

**ಬಾಗಲಕೋಟೆ:-** ವಿಜಾಪುರದಿಂದ ೫೬ ಮೈಲಿನ ಮೇಲೆ ಘಟಪ್ರಭಾ ನದಿಯ ದಂಡೆಯ ಮೇಲೆ ಅದೆ. ಇದು ತಾಲೂಕಿನ ಮುಖ್ಯ ಸ್ಥಳವಾದ್ದರಿಂದ ಇಲ್ಲಿ ಮಾಮಲೇದಾರ ಕಚೇರಿ ಮತ್ತು ಫೌಜದಾರ ಕಚೇರಿಯು ಅವೆ. ಪ್ರಾಂತ ಆಫೀಸರ ಕಚೇರಿ ಇರುವದಲ್ಲದೆ ಸಿವ್ಹಿಲ ಕೋರ್ಟ ಅದೆ. ಎರಡು ಹಾಯಸ್ಕೂಲಗಳು ಅವೆ. ಒಂದು ಆರ್ಟ್ಸ ಮತ್ತು ಸಾಯನ್ಸ ಕಾಲೇಜ ಅದೆ. ಈ ಊರ ಸಂತೆಯು ಶನಿವಾರ ದಿವಸ ಆಗುತ್ತದೆ. ಈ ಊರ ಸುತ್ತುಮುತ್ತಲಿನ ಊರುಗಳಲ್ಲಿ ಹತ್ತಿಯು ಹೆಚ್ಚಾಗಿ ಬೆಳೆಯುವದರಿಂದ ಈ ಊರಲ್ಲಿ ಹತ್ತಿಯ ವ್ಯಾಪಾರವು ಬಹಳ ದೊಡ್ಡ ಪ್ರಮಾಣದಿಂದ ಆಗುತ್ತದೆ. ಇಲ್ಲಿ ಸ್ಟೇಶನ ಇದ್ದದರಿಂದ ಇಲ್ಲಿಂದ ಅರಳೆಯು ಮುಂಬಯಿಗೆ ಕಳಿಸಲ್ಪಡುತ್ತದೆ. ಈ ಊರಲ್ಲಿ ಹತ್ತಿಯ ಜಿನ್ನಗಳೂ ಪ್ರೆಸ್ಸಗಳೂ ಅವೆ. ಈಗೀಗ ಸೇಂಗಾ ವ್ಯಾಪಾರವೂ ಬೆಳೆಯುತ್ತಲಿದೆ. ಹೀಗಾಗಿ ಈ ಊರು ವ್ಯಾಪಾರಕ್ಕೆ ಬಹಳ ಪ್ರಸಿದ್ಧವಾಗಿದೆ. ಈ ಊರ ಸುತ್ತಲು ಸಮೀಪದಲ್ಲಿ ಸಿಮೆಂಟಿನ ಕಲ್ಲುಗಳು ಸಿಗುವಂತೆ ಇದ್ದದರಿಂದ

ಸರಕಾರದವರು ಇಲ್ಲಿ ಸಿಮೆಂಟ ಕಾರಖಾನೆಯನ್ನು ತೆರೆದಿದ್ದಾರೆ. ಈಗ ಇಲ್ಲಿ ಪಾಟಿಯ ಕಾರಖಾನೆಗಳು ಚನ್ನಾಗಿ ನಡೆದಿವೆ. ಈ ಊರಲ್ಲಿ ಮೋಟಗಿ ಬಸವಣ್ಣನ ಜಾತ್ರೆಯು ಪ್ರತಿವರ್ಷ ಆಗುತ್ತಿದ್ದು, ಜಾತ್ರೆಯಲ್ಲಿ ದನಗಳ ಪ್ರದರ್ಶನದ ವ್ಯವಸ್ಥೆ ಮಾಡುತ್ತಾರೆ.

ಬೀಳಗಿಃ— ಇಲ್ಲಿ ಮಹಾಲಕರಿಯ ಕಚೇರಿ ಇರುವದಲ್ಲದೆ ಫೌಜದಾರ ಕಚೇರಿ ಇರುತ್ತದೆ. ಈ ಊರ ಮಗ್ಗಲಿಗೆ ಇರುವ ಒಂದು ಬಾಂವಿಯು ಬಹಳ ದೊಡ್ಡದಿದೆ. ಇದು ೧೫೦ ಫೂಟು ಉದ್ದ ಮತ್ತು ೭೫ ಫೂಟು ಅಗಲವಾದದ್ದು ಇರುತ್ತದೆ. ಈ ಊರಲ್ಲಿ ೨-೩ ಶಿಲಾಲಿಪಿಗಳು ಅವೆ. ಸಿದ್ಧೇಶ್ವರನ ಗುಡಿಯ ಮುಂದೆ ೩೦ ಫೂಟು ಎತ್ತರವಾದ ದೀಪಸ್ತಂಭವಿದೆ.

ಕಲಾದಗಿಃ – ಇದು ಮೊದಲು ವಿಜಾಪುರ ಜಿಲ್ಹೆಯ ಮುಖ್ಯಸ್ಥಳವಾಗಿತ್ತು. ಇಲ್ಲಿ ಕಂಬಳಿಗಳು ತಯಾರಾಗುತ್ತವೆ. ಈ ಊರಲ್ಲಿ ಹಣ್ಣಿನ ತೋಟಗಳು ಹೆಚ್ಚು ಅವೆ. ಈಗ ಇಲ್ಲಿ ಪಾಟಿಯ ಕಾರಖಾನೆಯನ್ನು ತೆಗೆದಿದ್ದು, ಕೆಲಸವು ಚನ್ನಾಗಿ ನಡೆದಿದೆ. ಗುರುವಾರ ಈ ಊರ ಸಂತೆ. ಇಲ್ಲಿ ಹತ್ತಿ ಮತ್ತು ಕಾಳುಕಡಿಯ ವ್ಯಾಪಾರವು ಹೆಚ್ಚು. ಸಂತೆಗೆ ದನಗಳು ಹೆಚ್ಚು ಕೂಡುತ್ತವೆ.

ಹಳ್ಳೂರಃ— ಇಲ್ಲಿ ಬಸವೇಶ್ವರ ಮೂರ್ತಿಯು ಬಹಳ ದೊಡ್ಡದಿದೆ. ಪ್ರತಿವರ್ಷ ಮಾರ್ಗಶೀರ್ಷ ಮಾಸದಲ್ಲಿ ಜಾತ್ರೆ ಆಗುತ್ತಿದೆ. ಊರಹೊರಗೆ ಮರಡಿಯ ಮೇಲೆ ಮೇಲ್ಗುಡಿ ಎಂಬ ಈಶ್ವರನ ಗುಡಿ ಅದೆ.

ತುಳಸಿಗೇರಿಃ — ಇಲ್ಲಿ ಹಣಮಂತ ದೇವರ ಗುಡಿ ಅದೆ. ಪ್ರತಿವರ್ಷ ದೊಡ್ಡ ಜಾತ್ರೆ ಆಗುತ್ತದೆ.

ಕುಂದರಗಿಃ— ಇಲ್ಲಿ ಉತ್ತಮ ತರದ ಕಂಬಳಿಗಳು ತಯಾರಾಗುತ್ತವೆ.

## ೨೧ ಬದಾಮಿ ತಾಲೂಕು.

ಮೇರೆಗಳು:— (ನಕಾಶ ನೋಡಿರಿ.) ಉತ್ತರಕ್ಕೆ ಬಾಗಲಕೋಟೆ ತಾಲೂಕು. ಪೂರ್ವಕ್ಕೆ ಹುನಗುಂದ ತಾಲೂಕು. ದಕ್ಷಿಣಕ್ಕೆ ಮಲಪ್ರಭಾ ನದಿ. ಅದರ ಆಚೆಗೆ ಧಾರವಾಡ ಜಿಲ್ಹೆಯು. ಪಶ್ಚಿಮಕ್ಕೆ ಬೆಳಗಾವ ಜಿಲ್ಹೆಯು.

### ಪ್ರಾಕೃತಿಕ ಸಂಗತಿಗಳು

**ಗುಡ್ಡಗಳು:—** ಈ ತಾಲೂಕಿನಲ್ಲಿ ಗುಡ್ಡಗಳು ಹೆಚ್ಚು. ಬದಾಮಿಯಿಂದ ಗುಳೇದಗುಡ್ಡದ ವರೆಗೆ ಒಂದು ಸಾಲು ಹೋಗಿದೆ. ಬೆಳವಲಕೊಪ್ಪದಿಂದ ಗೋವನಕೊಪ್ಪದ ಕಡೆಗೆ ಬೇರೊಂದು ಗುಡ್ಡದ ಸಾಲು ಹೋಗಿದೆ. ಇಲ್ಲಿಯ ಗುಡ್ಡಗಳಲ್ಲಿ ಕಟ್ಟಡಕ್ಕೆ ಬೇಕಾಗುವ ಉತ್ತಮ ಬಿಳಿ ಕಲ್ಲುಗಳು ಸಿಗುತ್ತವೆ. ಬೆಳವಲಕೊಪ್ಪದ ನೆರೆಯಲ್ಲಿ ಸಾಣಿಯ ಕಲ್ಲು ಮತ್ತು ಮೂರ್ತಿ ಮಾಡುವ ಕಲ್ಲುಗಳು ಸಿಗುತ್ತವೆ.

**ಭೂಮಿ-ಬೆಳೆ:—** ಗುಡ್ಡಗಳ ನೆರೆಯಲ್ಲಿ ಮಸಾರಿ ಭೂಮಿಗಳು ಅವೆ. ಎರೆ ಭೂಮಿಯು ಕಡಿಮೆ. ಗರಸು ಭೂಮಿಯು ಹೆಚ್ಚಿಗೆ ಅದೆ. ಇಲ್ಲಿಯ ಮುಖ್ಯ ಬೆಳೆಯು ಈಗ ಸೇಂಗಾ ಅನ್ನಬಹುದು. ಮುಂಗಾರಿ ಜೋಳವೂ ಬೆಳೆಯುತ್ತದೆ. ಮಲಪ್ರಭಾ ನದಿಯು ದಂಡೆಗುಂಟ ಇರುವ ಎರೆ ಭೂಮಿಗಳಲ್ಲಿ ಜೋಳ, ಗೋದಿ, ಹತ್ತಿ ಬೆಳೆಯುತ್ತವೆ.

**ಹವೆ:—** ಈ ತಾಲೂಕಿನ ಹವೆಯು ಉಷ್ಣವಾದದ್ದು. ಚಳಿಗಾಲದಲ್ಲಿ ತಂಪು ಹೆಚ್ಚು. ಕೆಲವು ಕಡೆಗೆ ಹಳ್ಳದ ನೀರು ನಿಂತು ಹವೆಯು ವಿಷಮವಾಗುತ್ತದೆ. ಅಂಥಲ್ಲಿ ಮಲೇರಿಯಾ ರೋಗದ ಪೀಡೆ ಹೆಚ್ಚು.

**ಹೊಳೆ-ಹಳ್ಳಗಳು:—** ದಕ್ಷಿಣ ದಿಕ್ಕಿಗೆ ಮತ್ತು ಪಶ್ಚಿಮ ಭಾಗದಲ್ಲಿ ಮಲಪ್ರಭಾ ನದಿಯು ಹರಿದಿದೆ. ೨-೩ ದೊಡ್ಡ ಹಳ್ಳಗಳು ಹರಿದಿವೆ.

### ಮಾರ್ಗಗಳು

**ಉಗಿಬಂಡಿಯ ಮಾರ್ಗ:—** ಸೊಲ್ಲಾಪುರ-ಹುಬ್ಬಳ್ಳಿ ಮಾರ್ಗವು ಹಾಯ್ದಿದ್ದು ಈ ತಾಲೂಕಿನಲ್ಲಿ ಬದಾಮಿ ಮತ್ತು ಗುಳೇದಗುಡ್ಡ-ರೋಡ ಇವೆರಡು ಸ್ಟೇಶನಗಳು ಅವೆ.

**ಲೈನ ಮಾರ್ಗಗಳು:** - ಬದಾಮಿಯಿಂದ ಲೈನ ಮಾರ್ಗಗಳು ನಾಲ್ಕು ಕಡೆಗೆ ಹೋಗಿವೆ. ೧. ಮುತ್ತಲಗೇರಿ, ಕಾಕನೂರ ಮೇಲಿಂದ ರಾಮದುರ್ಗಕ್ಕೆ ೨. ಚೊಳಚಗುಡ್ಡ, ಜಾಲಿಹಾಳ ಮೇಲಿಂದ ರೋಣಕ್ಕೆ. ೩. ಗುಳೇದ ಗುಡ್ಡಕ್ಕೆ. ೪. ಹಲಕುರ್ಕಿಗೆ.

ಗುಳೇದಗುಡ್ಡದಿಂದ ೧. ಅಗಸರಕೊಪ್ಪಕ್ಕೆ. ೨. ಶಿರೂರಿಗೆ. ೩. ಕಮತಗಿಗೆ. ಹೀಗೆ ಬೇರೆ ಮೂರು ಮಾರ್ಗಗಳು! ಅವೆ.

**ದೊಡ್ಡ ಊರುಗಳು:**-ಬದಾಮಿ. ಗುಳೇದಗುಡ್ಡ, ಕೆರೂರ, ಅಡಗಲ್ಲ, ಅನವಾಲ, ಬೇಲೂರ, ಚೊಳಚಗುಡ್ಡ, ಗೋವನಕೊಪ್ಪ, ಹಲಕುರ್ಕಿ, ಹೆಬ್ಬಳ್ಳಿ, ಹೊಸೂರ, ಹಂಸನೂರ, ಜಾಲಿಹಾಳ, ಕಟಗೇರಿ, ಮುತ್ತಲಗೇರಿ, ಕಾಗಲಗೊಂಬ, ಕೆರಕಲಮಟ್ಟಿ, ನೀಲಗುಂದ, ಪಟ್ಟದಕಲ್ಲು, ನಂದಿಕೇಶ್ವರ, ಮುಷ್ಠಿಗೇರಿ.

**ಪೋಸ್ಟ ಇದ್ದ ಊರುಗಳು:**-ಬದಾಮಿ, ಕೆರೂರ, ಗೋವನಕೊಪ್ಪ, ಮುಷ್ಠಿಗೇರಿ, ನೀಲಗುಂದ, ಬೇಲೂರ, ಹೊಸೂರ, ಮುತ್ತಲಗೇರಿ, ಚೊಳಚ ಗುಡ್ಡ, ಗುಳೇದಗುಡ್ಡ, ಕಟಗೇರಿ.

**ತಾರ ಆಫೀಸ ಇದ್ದ ಊರು:**—ಬದಾಮಿ, ಗುಳೇದಗುಡ್ಡ, ಕೆರೂರ.

## ಊರುಗಳ ವಿಶೇಷ ವರ್ಣನೆ

**ಬದಾಮಿ:**— ಇದು ತಾಲೂಕಿನ ಮುಖ್ಯ ಸ್ಥಳವು. ಇಲ್ಲಿ ಮಾಮ ಲೇದಾರ ಕಚೇರಿ ಮತ್ತು ಫೌಜದಾರ ಕಚೇರಿ ಅವೆ. ಈ ಊರಿಗೆ ಮೊದಲು ವಾತಾಪಿಪುರವೆಂದು ಹೆಸರು ಇತ್ತು. ಇದು ಚಾಲುಕ್ಯ ಅರಸರ ರಾಜ ಧಾನಿ ಆಗಿತ್ತು. ಆಗಿನ ಕಾಲಕ್ಕೆ ಎರಡೂ ಗುಡ್ಡಗಳ ನಡುವೆ ಒಂದು ದೊಡ್ಡ ಕೆರೆಯನ್ನು ಕಡಿಸಿ, ಅಲ್ಲಿಂದ ಊರಿಗೆ ನೆಲದ ಕೆಳಗಿನಿಂದ ನಳಗಳನ್ನು ತಕ್ಕೊಂ ಡಿರಬೇಕೆಂದು ಕಂಡುಬರುತ್ತದೆ. ಈ ಕೆರೆಗೆ ಹೊಂಡ ಅನ್ನುತ್ತಾರೆ. ಸೋಮ ವಾರ ಈ ಊರ ಸಂತೆ ಆಗುತ್ತದೆ. ಇತ್ತೀಚೆಗೆ! ಸೇಂಗಾ ಬಿತ್ತುವದು ಹೆಚ್ಚಾದಂತೆ ಈ ಊರಲ್ಲಿ ಸೇಂಗಾದ ವ್ಯಾಪಾರವೂ ಬೆಳೆಯುತ್ತಿದೆ. ಈಗ ಇಲ್ಲಿ ಒಂದು ಎಣ್ಣೆಯ ಗಿರಣಿಯನ್ನು ಹಾಕಿದ್ದಾರೆ. ಈ ಊರಲ್ಲಿ ಚಾಲುಕ್ಯ

ಅರಸರ ಕಾಲಕ್ಕೆ ಕಟ್ಟಿಸಿದ ಗುಡಿಗಳು ಅವೆ. ಊರ ಮಗ್ಗಲಿಗೆ ಗುಡ್ಡದೊಳಗೆ ಬಂಡೆಕಲ್ಲಿನಲ್ಲಿ ಕೊರೆದ ನಾಲ್ಕು ಬಸತಿಗಳು ಬಹಳ ಪ್ರಸಿದ್ಧ ಅವೆ. ಇವನು




**ಮೇಣಬಸದಿ**

ನೋಡಲಿಕ್ಕೆ ಬಹಳ ಕಡಿಯಿಂದ ಜನರು ಬರುತ್ತಾರೆ. ಈ ಗುಡಿಗಳಲ್ಲಿಯ ಸುಂದರವಾದ ಕೆತ್ತಿಗೆಯ ಕೆಲಸವನ್ನು ನೋಡಿ ಕಲ್ಲನ್ನು ಮೇಣದಂತೆ ಉಪಯೋಗಿಸಿದ್ದಾರೆಂದು ಇವಕ್ಕೆ **ಮೇಣಬಸದಿ** ಎಂದು ಅನ್ನುತ್ತಾರೆ.

ಗುಳೇದಗುಡ್ಡ:— ಈ ಊರಲ್ಲಿ ಮುನ್ಸಿಪಾಲಿಟಿ ಅದೆ. ಒಂದು ಹಾಯಸ್ಕೂಲೂ ಉಂಟು. ಇಲ್ಲಿಯ ನೇಕಾರಿಕೆ ಉದ್ಯೋಗವು ಬಹಳ ದೊಡ್ಡ ಪ್ರಮಾಣದಿಂದ ನಡೆಯುತ್ತದೆ. ಹೆಚ್ಚಾಗಿ ಖಣಗಳು ತಯಾರ ಆಗುತ್ತವೆ. ಈ ಖಣಗಳು ಬಹಳ ಕಡೆಗೆ ಮಾರಾಟಕ್ಕೆ ಹೋಗುತ್ತವೆ.

ಕೆರೂರ:— ಈ ಊರಲ್ಲಿ ನೇಕಾರಿಕೆಯ ಉದ್ಯೋಗವು ಹೆಚ್ಚು. ಬುಧವಾರ ದಿವಸ ಈ ಊರ ಸಂತೆ ಆಗುತ್ತದೆ. ಸಂತೆಗೆ ದನಗಳು ಹೆಚ್ಚು ಕೂಡುತ್ತವೆ. ಕಾಳು-ಕಡಿಯ ವ್ಯಾಪಾರವು ತಕ್ಕಮಟ್ಟಿಗೆ ಆಗುತ್ತದೆ.

ನಂದಿಕೇಶ್ವರ:— ಈ ಊರ ಹತ್ತರ ಗುಡ್ಡದೊಳಗೆ ಮಹಾಕೂಟೇಶ್ವರ ದೇವಾಲಯವು ಬಹಳ ಪುರಾತನ ಕಾಲದ್ದು ಅದೆ. ಇಲ್ಲಿ ಗುಡ್ಡ

ದೊಳಗಿಂದ ಒಂದು ಝರಿಯು ಸಣ್ಣಗೆ ಹರಿಯುತ್ತದೆ. ಇಲ್ಲಿಯ ಹೊಂಡದಿಂದ ತೋಟಗಳಿಗೆ ಕಾಲುವೆಗಳನ್ನು ತಕ್ಕೊಂಡಿದ್ದಾರೆ. ಮಹಾಕೂಟೇಶ್ವರ ದೇವಾಲಯದ ಸುತ್ತುಮುತ್ತು ಅನೇಕ ಲಿಂಗಗಳು ಅವೆ. ಈ ಸ್ಥಳದಲ್ಲಿ ಹಿಂದೆ ಅಗಸ್ತ್ಯ ಋಷಿಯು ತಪಸ್ಸು ಮಾಡಿದ್ದನೆಂದು ಹೇಳುತ್ತಾರೆ. ಪ್ರತಿ ವರ್ಷ ಮಹಾಕೂಟೇಶ್ವರನ ರಥೋತ್ಸವವು ಆಗುತ್ತದೆ.

**ಶಿವಯೋಗ ಮಂದಿರ:—** ಯೋಗಾಭ್ಯಾಸದ ಅನುಕೂಲತೆಗಾಗಿ ಮಲಪ್ರಭಾ ನದಿಯ ದಂಡೆಯ ಮೇಲೆ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಸ್ಥಾಪಿಸಿದ ಪುಣ್ಯಸ್ಥಳವು. ಇಲ್ಲಿ ಒಂದು ಗೋಶಾಲೆ ಅದೆ. ವೀರಶೈವ ಸಮಾಜದಲ್ಲಿ ಸ್ವಾಮಿಗಳಾಗುವಂಥವರಿಗೆ ಯೋಗಾಭ್ಯಾಸದ ಶಿಕ್ಷಣವು ಇಲ್ಲಿ ಸಿಗುತ್ತದೆ. ಪ್ರತಿವರ್ಷ ಮಹಾಶಿವರಾತ್ರಿಗೆ ರಥೋತ್ಸವವಾಗುತ್ತದೆ. ಉತ್ಸವವು ಆಧುನಿಕ ಪದ್ಧತಿಯಂತೆ ನಡೆಯುತ್ತಿದ್ದು, ಆ ಕಾಲಕ್ಕೆ ದೊಡ್ಡ ದೊಡ್ಡ ವಿದ್ವಾಂಸರ ಭಾಷಣ, ಕೀರ್ತನಗಳು ನಡೆಯುವಂತೆ ವ್ಯವಸ್ಥೆ ಇರುತ್ತದೆ.

**ಬನಶಂಕರಿ ದೇವಾಲಯ:—** ಇದು ಬದಾಮಿಯಿಂದ ಆಗ್ನೇಯಕ್ಕೆ ೨ ಮೈಲಿನ ಮೇಲೆ ಚೊಳಚಗುಡ್ಡಕ್ಕೆ ಹೋಗುವ ರಸ್ತೆಯ ಮೇಲೆ




ಬನಶಂಕರಿ ದೇವಾಲಯ.

ಕಟ್ಟಿಸಿದ ಒಂದು ಪುರಾತನ ದೇವಾಲಯು. ಈ ದೇವರ ಜಾತ್ರೆಯು ಪ್ರತಿ ವರ್ಷ ಬನದ ಹುಣ್ಣಿವಿಗೆ ಬಹಳ ವಿಜೃಂಭಣೆಯಿಂದ ಆಗುತ್ತದೆ. ಜಾತ್ರೆಗೆ ಬಹಳ ಕಡೆಯಿಂದ ಜನರು ಬರುತ್ತಾರೆ. ಈ ದೇವಾಲಯದ ಸುತ್ತುಮುತ್ತು ಬಾಳೆ ಮತ್ತು ಎಲೆಬಳ್ಳಿಯ ತೋಟಗಳು ಬಹಳ ಅವೆ. ಟೆಂಗಿನ ಮರಗಳು ಅವೆ. ಬನಗಳ ಮಧ್ಯದಲ್ಲಿ ಇರುವದರಿಂದ ಇದಕ್ಕೆ ಬನಶಂಕರಿ ಎಂದು ಹೆಸರು ಬಂದಿದೆ. ಈ ಗುಡಿಯ ಎದುರಿನಲ್ಲಿ ಒಂದು ಹೊಂಡವು ಬಹಳ ಆಳವಾದದ್ದು ಇರುತ್ತದೆ. ಇದರ ಸುತ್ತುಮುತ್ತು ಕಲ್ಲಿನ ಫರಸಿ ಅದೆ. ಈ ಹೊಂಡದಿಂದ ಹರಿಯುವ ನೀರಿನಿಂದ ತೋಟಗಳಿಗೆ ಕಾಲುವೆಗಳನ್ನು ತಕ್ಕೊಂಡಿದ್ದಾರೆ.

## ೨೨. ಜಮುಖಂಡಿ ತಾಲೂಕು.

**ಮೇರೆಗಳು:—** ಉತ್ತರಕ್ಕೆ ಬೆಳಗಾಂವ ಜಿಲ್ಹೆ ಮತ್ತು ವಿಜಾಪುರ ತಾಲೂಕು. ಪೂರ್ವಕ್ಕೆ ವಿಜಾಪುರ ತಾಲೂಕು. ದಕ್ಷಿಣಕ್ಕೆ ಮುಧೋಳ ತಾಲೂಕು. ಪಶ್ಚಿಮಕ್ಕೆ ಬೆಳಗಾಂವ ಜಿಲ್ಹೆ.

### ಪ್ರಾಕೃತಿಕ ಸಂಗತಿಗಳು

**ಗುಡ್ಡಗಳು:—** ಜಮುಖಂಡಿ ಶಹರದ ದಕ್ಷಿಣಕ್ಕೆ ೨೦ ಮೈಲು ಉದ್ದಾದ ಗುಡ್ಡದ ಸಾಲು ಅದೆ. ಸಾವಳಗಿ, ತುಂಗಳಗಳಲ್ಲಿ ಗುಡ್ಡಗಳು ಅವೆ.

**ಭೂಮಿ-ಬೆಳೆ:—** ಎರೆ ಭೂಮಿಯು ಹೆಚ್ಚು ಅದೆ. ಗುಡ್ಡಗಳ ನೆರೆಯಲ್ಲಿ ಮಸಾರಿ ಭೂಮಿ ಅದೆ. ಈ ತಾಲೂಕಿನಲ್ಲಿ ಜೋಳ, ಗೋದಿ, ಹತ್ತಿ, ಸೇಂಗಾ, ಕುಸುಬೆ, ಕಡಲೆ ಬೆಳೆಯುತ್ತವೆ.

**ಹವೆ:—** ಉಷ್ಣವಾದದ್ದು.

**ಹೊಳೆ-ಹಳ್ಳಗಳು:—** ಕೃಷ್ಣಾ ನದಿಯು ತಾಲೂಕಿನ ಮಧ್ಯದಲ್ಲಿ ಹರಿದಿದೆ. ಸಣ್ಣ ಸಣ್ಣ ಹಳ್ಳಗಳು ಅವೆ. ತದಲಬಾಗಿಯ ಹಳ್ಳವು ದೊಡ್ಡದು.

**ಕೆರೆಗಳು:-** ಜಮುಖಂಡಿ, ಕಲ್ಹಳ್ಳಿ, ಸಾವಳಗಿ ಕೆರೆಗಳು ದೊಡ್ಡವು ಅವೆ.

## ಮಾರ್ಗಗಳು

ಈ ತಾಲೂಕಿನಲ್ಲಿ ಉಗಿಬಂಡಿಯ ಮಾರ್ಗವು ಹಾಯ್ದಿರುವದಿಲ್ಲ.

**ಲೈನಮಾರ್ಗಗಳು:**-ಜಮಖಂಡಿ ಊರಿಂದ ಐದು ಕಡೆಗೆ ಮಾರ್ಗಗಳು ಹೋಗಿವೆ. ೧. ಕುಡಚಿ-ರೋಡಿಗೆ. ರಬಕವಿಯಿಂದ ಒಂದು ಶಾಖೆಯು ಮಹಾಲಿಂಗಪುರಕ್ಕೆ. ೨. ಸಿದ್ದಾಪುರ ಮೇಲಿಂದ ಮುಧೋಳಕ್ಕೆ. ೩. ಜಂಬಗಿ, ಸನಾಳ, ಸಾವಳಗಿ ಮೇಲಿಂದ ವಿಜಾಪುರಕ್ಕೆ. ೪. ಮೈಗೂರ ಮೇಲಿಂದ ಅಥಣಿಗೆ ೫. ಜಖನೂರಕ್ಕೆ.

**ದೊಡ್ಡ ಊರುಗಳು:**- ಜಮಖಂಡಿ, ಬನಹಟ್ಟಿ, ರಬಕವಿ, ತೆರದಾಳ, ಅಲಗೂರ, ಆಸಂಗಿ, ಬಿದರಿ ಚಿಮ್ಮಡ, ಗೋಟೆ, ಹಾಳಿಂಗಳಿ, ಹಿಪ್ಪರಗಿ, ಹಿರೇ ಪಡಸಲಗಿ, ಹೊಸೂರ, ಹನಗಂಡಿ, ಹುಲ್ಯಾಳ, ಹುನ್ನೂರ, ಕೊಣ್ಣೂರ, ಕುಲಹಳ್ಳಿ, ಸಾವಳಗಿ, ಸಿದ್ದಾಪೂರ, ತುಂಗಳ.

**ಪೋಸ್ಟ ಇದ್ದ ಊರುಗಳು:**—ಆಲಗೂರ, ಬನಹಟ್ಟಿ, ಚಿಮ್ಮಡ, ಹಾಳಿಂಗಳಿ, ಹನಗಂಡಿ, ಹುಲ್ಯಾಳ, ಹುನ್ನೂರ, ಜಮಖಂಡಿ, ರಬಕವಿ, ರಾಮತೀರ್ಥ, ಸಾವಳಗಿ, ತೇರದಾಳ, ತುಂಗಳ.

**ತಾರ ಆಫೀಸ ಇದ್ದ ಊರುಗಳು:**— ಜಮಖಂಡಿ, ರಬಕವಿ, ಬನಹಟ್ಟಿ, ತೇರದಾಳ.

## ಊರುಗಳ ವಿಶೇಷ ವರ್ಣನೆ.

**ಜಮಖಂಡಿ:**— ಇದು ತಾಲೂಕಿನ ಮುಖ್ಯಸ್ಥಳವು. ಇಲ್ಲಿ ಮಾಮಲೇದಾರ ಕಚೇರಿ ಮತ್ತು ಫೌಜದಾರ ಕಚೇರಿ ಅವೆ ಈಗ ಇಲ್ಲಿ ಪ್ರಾಂತ ಆಫೀಸರ ಕಚೇರಿ ಮಾಡಿದ್ದಾರೆ. ಸಿವ್ಹಿಲ ಕೋರ್ಟ ಮತ್ತು ರೆಸಿಡೆಂಟ ಮ್ಯಾಜಿಸ್ಟ್ರೇಟ ಕೋರ್ಟ ಅವೆ. ಈ ಊರಲ್ಲಿ ಜಂಬುಕೇಶ್ವರ ದೇವಾಲಯವು ಬಹಳ ಪುರಾತನ ಕಾಲದ್ದು ಅದೆ. ಜಂಬುಕೇಶ್ವರ ಹೆಸರಿನ ಮೇಲಿಂದ ಈ ಊರಿಗೆ ಜಂಬುಕಂಡಿ ಎಂಬ ಹೆಸರು ಬಂದಿರಬೇಕೆಂದೂ ಅದೇ ಈಗ ಜಮಖಂಡಿ ಆಗಿರಬೇಕೆಂದೂ ಹೇಳುತ್ತಾರೆ. ಈ ಊರಲ್ಲಿ ಉಮಾರಾಮೇಶ್ವರ ಎಂಬ ಇನ್ನೊಂದು ಗುಡಿಯು ಬಹಳ ಸುಂದರವಾಗಿ ಕಟ್ಟಿಸಿದ್ದು ಅದೆ. ಇಲ್ಲಿ ಹಿಂದಕ್ಕೆ

ಅಬೂಬಕರ ಎಂಬ ಸತ್ಪುರುಷರು ಆಗಿಹೋಗಿದ್ದು, ಅವರ ಗೋರಿಯ ಮೇಲೆ ಶ್ರೀ ಯಶವಂತರಾವ ಪಟವರ್ಧನ ಇವರು ಕಟ್ಟಿಸಿದ ಇಮಾರತು ಬಹಳ ಸುಂದರವಾಗಿದೆ. ಈ ಊರ ಸುತ್ತಲಿನ ಭೂಮಿಗಳು ಬೆಳೆಯುಳ್ಳವಾದ್ದರಿಂದ ಇಲ್ಲಿ ಹತ್ತಿ, ಗೋದಿ, ಜೋಳ, ಸೇಂಗಾ ಇವೆಲ್ಲ ಮಾರಲಿಕ್ಕೆ ಬರುತ್ತವೆ. ಊರಲ್ಲಿ ನಳದಿಂದ ನೀರು ತಕ್ಕೊಂಡಿದ್ದಾರೆ. ಇಲೆಕ್ಟ್ರಿಕ್ ದೀಪದ ವ್ಯವಸ್ಥೆ ಇದೆ. ಗುರುವಾರ ಈ ಊರ ಸಂತೆ ಆಗುತ್ತಿದೆ.

ರಾಮತೀರ್ಥ:—ಜಮಖಂಡಿಯಿಂದ ಪಶ್ಚಿಮಕ್ಕೆ ಸುಮಾರು ಒಂದು ಮೈಲಿನ ಮೇಲೆ ಹಿಂದಿನ ಜಮಖಂಡಿ ಸಂಸ್ಥಾನಿಕರು ವಾಸಿಸುವದಕ್ಕಾಗಿ ಕಟ್ಟಿಸಿದ ಒಂದು ಅರಮನೆಯು ಅದೆ. ಇಲ್ಲಿಯೇ ಒಂದು ಮೋಹಿನಿ ಹಾಲ ಎಂಬ ಕಟ್ಟಡವು ಬಹಳ ಸುಂದರವಾಗಿ ಕಟ್ಟಿಸಿದ್ದು ಅದೆ. ಸಂಸ್ಥಾನಿಕರು ಇದ್ದಾಗ್ಗೆ ಈ ಹಾಲದಲ್ಲಿ ನಾಟಕಗಳು ಆಗುತ್ತಿದ್ದವು. ಇಲ್ಲಿ ಶ್ರೀ ರಾಮೇಶ್ವರ ಗುಡಿಯು ಮುಖ್ಯವಾಗಿದ್ದು ಕರಂಡೇಶ್ವರಿ ಮತ್ತು ಗಣಪತಿ ಗುಡಿಗಳು ಇಲ್ಲಿ ಅವೆ. ಹಿಂದೆ ಶ್ರೀರಾಮಚಂದ್ರನು ದಂಡಕಾರಣ್ಯಕ್ಕೆ ಬಂದಾಗ್ಗೆ ಇಲ್ಲಿ ಕೆಲವು ದಿವಸ ವಾಸ ಮಾಡಿದ್ದನೆಂದು ಹೇಳಲಾಗುತ್ತದೆ.

ಶೂರಪಾಲಿ:-ಇದು ಮೊದಲು ಅಥಣಿ ತಾಲೂಕಿನಲ್ಲಿಯ ಹಳ್ಳಿಯು. ಈಗ ಜಮಖಂಡಿ ತಾಲೂಕಿನಲ್ಲಿ ಸಮಾವೇಶವಾಗಿದೆ. ಇಲ್ಲಿಯ ನರಸಿಂಹ ದೇವರ ಗುಡಿಯು ಬಹಳ ಪುರಾತನ ಕಾಲದ್ದು ಅದೆ. ಪ್ರತಿವರ್ಷ ಇಲ್ಲಿ ಸಮಾರಾಧನೆ ಆಗುತ್ತದೆ. ಇದಕ್ಕೆ ದಕ್ಷಿಣ ಕಾಶಿ ಎಂದು ಕರೆಯುತ್ತಾರೆ.

ತುಂಗಳ: ಇಲ್ಲಿ ಉತ್ತಮವಾದ ಕಂಬಳಿಗಳು ತಯಾರಾಗುತ್ತವೆ

ಕಂಕಣವಾಡಿ:— ಇಲ್ಲಿ ಗುಹೇಶ್ವರ ದೇವಾಲಯವು ಬಹಳ ಪುರಾತನ ಕಾಲದ್ದು ಅದೆ.

ಹುನ್ನೂರು:— ಇಲ್ಲಿ ನೇಕಾರಿಕೆಯ ಉದ್ಯೋಗವು ದೊಡ್ಡ ಪ್ರಮಾಣದಿಂದ ನಡೆಯುತ್ತದೆ.

ಕಲ್ಹಳ್ಳಿ:— ಇಲ್ಲಿ ವೆಂಕಟೇಶ್ವರ ದೇವಾಲಯವು ಪುರಾತನ ಕಾಲದು ಅದೆ. ಪ್ರತಿ ವರ್ಷ ದೊಡ್ಡ ಜಾತ್ರೆಯಾಗುತ್ತದೆ.

ತೇರದಾಳ:— ಇಲ್ಲಿಯ ಭೂಮಿಗಳು ಬಹಳ ಬೆಳೆಯುಳ್ಳವು. ವ್ಯಾಪಾರವು ದೊಡ್ಡ ಪ್ರಮಾಣದಿಂದ ನಡೆಯುತ್ತದೆ. ಇಲ್ಲಿ ತಾಮ್ರ ಹಿತ್ತಾಳಿಯ ಪಾತ್ರೆಗಳು ತಯಾರಾಗುತ್ತವೆ. ಇಲ್ಲಿಯ ಪ್ರಭುದೇವರ ಗುಡಿಯು ಪ್ರಸಿದ್ಧವದೆ.

ಕಡಪಟ್ಟಿ:— ಇಲ್ಲಿಯ ಬಸವೇಶ್ವರ ದೇವಾಲಯವು ಬಹಳ ಪುರಾತನ ಕಾಲದ್ದು ಅದೆ. ಪ್ರತಿವರ್ಷ ದೊಡ್ಡ ಜಾತ್ರೆಯಾಗುತ್ತದೆ. ಜಾತ್ರೆಯಲ್ಲಿ ಕಂಬಳಿ ಮತ್ತು ಹಾಸುವ ಜಾಡಿಗಳು ವ್ಯಾಪಾರಕ್ಕೆ ಬಹಳ ಕಡೆಯಿಂದ ಬರುತ್ತವೆ.

ರಬಕವಿ:— ಇಲ್ಲಿ ಸೀರೆಗಳನ್ನು ನೇಯುವ ಉದ್ಯೋಗವು ಬಹಳ ದೊಡ್ಡ ಪ್ರಮಾಣದಿಂದ ನಡಿಯುತ್ತದೆ. ಇಲ್ಲಿಂದ ಸೀರೆಗಳು ಬಹಳ ಕಡೆಗೆ ದೊಡ್ಡ ಊರುಗಳಿಗೆ ಕಳಿಸುತ್ತಾರೆ. ಇಲ್ಲಿ ಒಂದು ಹಾಯಸ್ಕೂಲ ಅದೆ. ಈ ಊರಿಗೆ ಮುನಸಿಪಾಲ್ಟಿ ಅದೆ.

ಬನಹಟ್ಟಿ:— ನೇಕಾರಿಕೆಯ ಉದ್ಯೋಗಕ್ಕೆ ಪ್ರಸಿದ್ಧವಾದ ಊರು. ಇಲ್ಲಿ ಸೀರೆಯ ವ್ಯಾಪಾರವು ಬಹಳ ದೊಡ್ಡ ಪ್ರಮಾಣದಿಂದ ನಡೆಯುತ್ತದೆ. ಈ ಊರಿಗೆ ಮುನ್ಸಿಪಾಲಟಿ ಅದೆ. ಮತ್ತು ಒಂದು ಹಾಯಸ್ಕೂಲ ಅದೆ.

## ೨೩. ಮುಧೋಳ ತಾಲೂಕು.

ಮೇರೆಗಳು:— ಉತ್ತರಕ್ಕೆ ಜಮಖಂಡಿ ತಾಲೂಕು. ಪೂರ್ವಕ್ಕೆ ಬಾಗಲಕೋಟೆ ತಾಲೂಕು, ದಕ್ಷಿಣಕ್ಕೆ ಮತ್ತು ಪಶ್ಚಿಮಕ್ಕೆ ಬೆಳಗಾಂವ ಜಿಲ್ಲೆ.

### ಪ್ರಾಕೃತಿಕ ಸಂಗತಿಗಳು

ಗುಡ್ಡಗಳು:— ಅಲ್ಲಲ್ಲಿ ಗುಡ್ಡಗಳು ಅವೆ. ಲೋಕಾಪುರ, ಹಲಗಲಿ ಮತ್ತು ಬಂಟನೂರ ಹತ್ತರ ಗುಡ್ಡಗಳು ತುಸು ಅವೆ.

ಭೂಮಿ–ಬೆಳೆ:— ಘಟಪ್ರಭಾ ನದಿಯ ದಂಡೆಗುಂಟ ಎರೆ ಭೂಮಿ ಅದೆ. ಗುಡ್ಡದ ನೆರೆಯಲ್ಲಿ ಮಸಾರಿ ಭೂಮಿಗಳು ಅವೆ. ಆದಾಗ್ಯೂ ಎರೆ

ಭೂಮಿಯೇ ಹೆಚ್ಚು ಅವೆ. ಇಲ್ಲಿ ಹತ್ತಿ, ಗೋದಿ, ಸೇಂಗಾ ಹೆಚ್ಚಿಗೆ ಬೆಳೆಯುತ್ತವೆ. ಜೋಳ, ತೊಗರಿ ಇವಾದರೂ ಸರಿಯಾಗಿ ಬೆಳೆಯುತ್ತವೆ.

ಹವೆ:— ಉಷ್ಣವಾದದ್ದು. ಬೆಸಿಗೆಯಲ್ಲಿ ಹೆಚ್ಚು ಶಕೆ.

ಹೊಳೆ-ಹಳ್ಳಗಳು:—ಘಟಪ್ರಭಾ ನದಿಯು ಈ ತಾಲೂಕಿನ ಮಧ್ಯದಲ್ಲಿ ಪೂರ್ವಾಭಿಮುಖವಾಗಿ ಹರಿದಿದೆ.

## ಲೈನ ಮಾರ್ಗಗಳು.

ಉಗಿಬಂಡಿಯ ಮಾರ್ಗವು ಈ ತಾಲೂಕಿನಲ್ಲಿ ಹಾಯ್ದಿಲ್ಲ. ಲೈನ ಮಾರ್ಗಗಳು ಮುಧೋಳದಿಂದ ಆರು ಕಡೆಗೆ ಹೋಗಿವೆ. ೧. ಗಲಗಲಿ ಮೇಲಿಂದ ಬೀಳಗಿಗೆ. ೨. ಯಾದವಾಡ ಕಡೆಗೆ. ೩. ಅನಗವಾಡಿಗೆ. ೪. ಮಂಟೂರಿಗೆ. ೫. ಜಮಖಂಡಿಗೆ. ೬. ಮಹಾಲಿಂಗಪುರಕ್ಕೆ. ಲೋಕಾಪುರದಿಂದ ಯಾಡವಾಡಕ್ಕೆ ಬೇರೆ ಮಾರ್ಗವು ಹೋಗಿದೆ.

**ದೊಡ್ಡ ಊರುಗಳು:**—ಮಹಾಲಿಂಗಪೂರ, ಮುಧೋಳ, ಬರಿಗಿ, ಬೆಳಗಲಿ, ಬಂಟನೂರ, ಧವಳೇಶ್ವರ, ಹಲಗಲಿ, ಇಂಗಳಿಗಿ, ಜಂಬಿಗಿ, ಕೆಸರಗೊಪ್ಪ, ಕುಳಲಿ, ಲೋಕಾಪುರ, ಮಂಟೂರ, ಮೆಳ್ಳಿಗೇರಿ, ಮೆಟಗುಡ್ಡ, ನಾಗರಾಳ, ಶಿರೋಳ, ಉತ್ತೂರ.

**ಪೋಸ್ಟ ಇದ್ದ ಊರುಗಳು:**— ಮುಧೋಳ, ಮಹಾಲಿಂಗಪೂರ ಲೋಕಾಪುರ, ಬೆಳಗಲಿ.

**ತಾರ ಆಫೀಸ ಇದ್ದ ಊರು:**— ಮುಧೋಳ.

## ಊರುಗಳ ವಿಶೇಷ ವರ್ಣನೆ

**ಮುಧೋಳ:**— ಇದು ತಾಲೂಕಿನ ಮುಖ್ಯ ಸ್ಥಳವಿದ್ದು, ಇಲ್ಲಿ ಮಾಮಲೇದಾರ ಕಚೇರಿ ಮತ್ತು ಫೌಜದಾರ ಕಚೇರಿ ಅವೆ. ಇಲ್ಲಿ ಒಂದು ಹಾಯಸ್ಕೂಲ ಅದೆ. ಇದಕ್ಕೆ ಕಿಂಗ ಜಾರ್ಜ ಹಾಯಸ್ಕೂಲ ಎಂದು ಹೆಸರು ಅದೆ. ಸಧ್ಯಕ್ಕೆ ಇದನ್ನು ಬಾಗಲಕೋಟೆ ಬಸವೇಶ್ವರ ವಿದ್ಯಾವರ್ಧಕ ಸಂಘದವರು ನಡೆಯಿಸುತ್ತಾರೆ. ಇದು ಕವಿಚಕ್ರವರ್ತಿಯಾದ ರನ್ನನ ಜನ್ಮ ಸ್ಥಳವು. ಈ ಊರಲ್ಲಿ ಭೂಮಿಯ ಕೆಳಗೆ ಕಟ್ಟಿದ ಒಂದು ಪುರಾತನ ಶಿವಾಲಯವು ಅದೆ. ಬೇರೊಂದು ಶ್ರೀ ರಾಮದೇವರ ಗುಡಿಯೂ ಅದೆ. ಇಲ್ಲಿ ಪ್ರತಿವರ್ಷ ರಾಮನವಮಿಯ ಉತ್ಸವವು ಬಹಳ ವಿಜೃಂಭಣೆಯಿಂದ ನಡೆಯುತ್ತದೆ. ಇಲ್ಲಿ ಸಂಸ್ಥಾನ ಕಾಲದಿಂದ ಜನರಲ್ಲಿ ತಾಲೀಮು ಮಾಡುವ ಮತ್ತು ಕುಸ್ತಿಯಾಡುವ ಅಭಿರುಚಿಯು ಬಹಳ. ಮುಧೋಳದ ಬೇಟೆಯ ನಾಯಿಗಳು ಬಹಳ ಪ್ರಸಿದ್ಧ. ದೂರ ದೂರಿನವರು ಈ ನಾಯಿಗಳನ್ನು ಒಯ್ಯುತ್ತಾರೆ. ಊರ ಉತ್ತರಕ್ಕೆ ಸಯ್ಯದ ಸಾಹೇಬನ ದರ್ಗಾ ಪ್ರಸಿದ್ಧ ವದೆ. ಈ ಊರಿಗೆ ಕೆರೆ, ಭಾವಿ, ಮತ್ತು ನದಿಯಿಂದ ನೀರಿನ ಪುರವಠೆಯು ಸಾಕಷ್ಟು ಅದೆ.

**ಮಹಾಲಿಂಗಪುರ:**— ಈ ಊರಲ್ಲಿ ಮಹಾಲಿಂಗೇಶ್ವರ ಎಂಬ ಶಿವ ಯೋಗಿಗಳು ಆಗಿಹೋಗಿದ್ದಾರೆ. ಇವರ ಹೆಸರಿನ ಮೇಲಿಂದ ಈ ಊರಿಗೆ ಮಹಾಲಿಂಗಪುರ ಎಂಬ ಹೆಸರು ಬಂದಿದೆ. ಇಲ್ಲಿ ಮಹಾಲಿಂಗೇಶ್ವರ ಮಠವು



ಮಹಾಲಿಂಗೇಶ್ವರ ಮಠ

ಬಹಳ ಭವ್ಯವಾದದ್ದು ಅದೆ. ಪ್ರತಿವರ್ಷ ದೊಡ್ಡ ಜಾತ್ರೆ ಆಗುತ್ತದೆ. ಈ ಊರ ದಕ್ಷಿಣಕ್ಕೆ ಗುಡ್ಡದಮೇಲೆ ಇರುವ ಚನ್ನಗಿರೇಶ್ವರ ದೇವಾಲಯವು ಪ್ರಾಚೀನ ಕಾಲದ್ದು ಅದೆ. ಈ ಊರಲ್ಲಿ ನೇಕಾರಿಕೆಯ ಉದ್ಯೋಗವು ಹೆಚ್ಚು. ಇಲ್ಲಿ ವ್ಯಾಪಾರವಾದರೂ ಹೆಚ್ಚು ಆಗುತ್ತದೆ. ಈ ಊರಲ್ಲಿ ಮ್ಯುನ್ಸಿಪಾಲಿಟಿಯು ಅದೆ. ಮತ್ತು ದವಾಖಾನೆಗಳಿವೆ.

**ಲೋಕಾಪೂರ:**— ಇಲ್ಲಿಯ ಲೋಕನಾಥನ ದೇವಾಲಯವು ಪುರಾತನ ಕಾಲದ್ದು ಅದೆ. ಪ್ರತಿವರ್ಷ ಈ ದೇವರ ಜಾತ್ರೆ ಆಗುತ್ತದೆ. ಈಗ ಈ ಊರಲ್ಲಿ ಒಂದು ಪಾಟಿಯ ಕಾರಖಾನೆಯನ್ನು ತೆಗೆದಿದ್ದಾರೆ.

**ಬೆಳಗಲಿ:**— ಈ ಊರು ಪುರಾತನ ಕಾಲದ್ದು ಇದ್ದು ರನ್ನ ಮಹಾಕವಿಯು ಈ ಊರಿನ ಬಗ್ಗೆ ತನ್ನ ಕಾವ್ಯದಲ್ಲಿ ಉಲ್ಲೇಖವನ್ನು ಮಾಡಿದ್ದಾನೆ. ಇಲ್ಲಿ ನೇಕಾರಿಕೆಯ ಉದ್ಯೋಗವು ಹೆಚ್ಚು. ಇಲ್ಲಿ ಹಳೇ ಶಿಲಾಲಿಪಿಗಳು ಅವೆ.

**ಹಲಗಲಿ:**—ಈ ಊರಲ್ಲಿಯ ಬೇಡರು ಪ್ರಸಿದ್ಧರು. ಹಿಂದಿನ ಕಾಲದಲ್ಲಿ ಜಡಗಾ, ಬಾಲಾ ಎಂಬ ವೀರರು ಆಗಿ ಹೋಗಿದ್ದು, ಅವರ ಹೆಸರುಗಳು ಇನ್ನೂ ಆ ಭಾಗದ ಜನರ ನೆನಪಿನಲ್ಲಿ ಅವೆ.

**ಶಿರೋಳ:**— ಇಲ್ಲಿಯ ಕಾಡಸಿದ್ಧೇಶ್ವರ ದೇವಾಲಯವು ಬಹಳ ಪುರಾತನ ಕಾಲದ್ದು ಅದೆ. ಈ ಊರಲ್ಲಿ ತೋಟಗಳು ಹೆಚ್ಚು.

## ೨೪. ಬದಾಮಿಯ ಪ್ರವಾಸ.

ಒಮ್ಮೆ ಮಹಾಲಿಂಗಪೂರ ಶಾಲೆಯಲ್ಲಿಯ ಮೂರನೆಯ ವರ್ಗದ ವಿದ್ಯಾರ್ಥಿಗಳು ಬದಾಮಿ ಪ್ರವಾಸವನ್ನು ಮಾಡಬೇಕೆಂದು ಹೊರಟರು. ಸಂಗಡ ತಮ್ಮ ವರ್ಗದ ಗುರುಗಳನ್ನೂ ಹೊರಡಿಸಿದರು. ಈ ಪ್ರವಾಸದಿಂದ ಇಡೀ ಜಿಲ್ಹೆಯ ಅನುಭವ ಸಿಗಬೇಕೆಂದು ಮುಧೋಳ ಮೇಲಿಂದ ಬದಾಮಿಗೆ ಹೋಗದೆ,ಜಮಖಂಡಿಯ ಮೇಲಿಂದ ಹಾಯ್ದು ವಿಜಾಪೂರ ನೋಡಿಕೊಂಡು ಬದಾಮಿಗೆ ಬರಬೇಕೆಂದು ಗೊತ್ತು ಮಾಡಿದರು. ಅದರಂತೆ ಮೊದಲು ಅವರು ರಬಕವಿಗೆ ಬಂದರು.ಅಲ್ಲಿಂದ ಬನಹಟ್ಟಿಯ ಮೇಲೆ ಹಾಯ್ದು ಜಮಖಂಡಿಗೆ ಬಂದರು.

### ಜಮಖಂಡಿ ಊರು

ಈ ಊರಿಗೆ ಬಂದ ಕೂಡಲೆ ಮೋಟಾರದಿಂದ ಇಳಿದು ಅಲ್ಲಿಯೇ ಸಮೀಪದಲ್ಲಿ ಮರಡಿಯ ಮೇಲೆ ಇರುವ ರಾಮತೀರ್ಥವೆನ್ನುವ ಪ್ರದೇಶಕ್ಕೆ ಹೋಗಿ ರಾಜವಾಡೆ, ಮೋಹಿನಿ ಮಹಾಲ, ರಾಮೇಶ್ವರಗುಡಿಗಳನ್ನು ನೋಡಿದರು. ಹಾಗೇ ಮರಡಿಯ ಮೇಲಿಂದ ಕೆಳಗೆ ಬಂದು ಕಡಪಟ್ಟಿ ಗ್ರಾಮದಲ್ಲಿಯ ಬಸವೇಶ್ವರ ದೇವಾಲಯವನ್ನು ನೋಡಿದರು. ಪೇಟೆಯೊಳಗಿಂದ ಹಾಯ್ದು ಉಮಾರಾಮೇಶ್ವರ ಗುಡಿಗೆ ಹೋದರು. ಇಲ್ಲಿಂದ ಮುಂದೆ ಹೋಗಿ ಜಂಬುಕೇಶ್ವರ ಗುಡಿಯನ್ನು ನೋಡಿಕೊಂಡು ತಿರುಗಿ ಮೋಟಾರ ಸ್ಟ್ಯಾಂಡಿಗೆ ಬಂದರು.

ಇಲ್ಲಿಂದ ವಿಜಾಪುರಕ್ಕೆ ಹೊರಡುವ ಮೋಟಾರದಲ್ಲಿ ಕುಳಿತು ಜಂಬಗಿ ಸಾವಳಗಿ, ತಿಕೋಟಾ ಮೇಲಿಂದ ವಿಜಾಪುರಕ್ಕೆ ಬಂದರು.

### ವಿಜಾಪುರ ನಗರ

ಇಲ್ಲಿ ಮೋಟಾರದಿಂದ ಇಳಿದ ಕೂಡಲೆ ತಾಜಬಾವಡಿ ನೋಡಿದರು. ಅಲ್ಲಿಂದೆ ಊರ ಹೊರಗಿನ ಇಬ್ರಾಹಿಮರೋಜಾ ನೋಡಿಕೊಂಡು ತಿರುಗಿ ಊರಲ್ಲಿ ಬಂದು ಮುಲಿಕ-ಇ-ಮೈದಾನ ತೋಪ ಮತ್ತು ಉಪಲಿ ಬುರುಜ ನೋಡಿದರು. ಇಲ್ಲಿ ಸಿದ್ಧೇಶ್ವರ ದರ್ಶನ ತಕ್ಕೊಂಡು ಊರ

ಮಧ್ಯದಲ್ಲಿಯ ರಸ್ತೆ ಹಿಡಿದು ಸಾಲು ಸಾಲಾಗಿ ಇರುವ ಅಂಗಡಿಗಳನ್ನು ನೋಡುತ್ತ ಸ್ಟೇಶನ ದಾರೀ ಹಿಡಿದರು. ದಾರಿಯ ಮೇಲೆ ಆಸಾರ ಮಹಾಲ್, ಜುಮ್ಮಾ ಮಶೀದೆ ನೋಡಿಕೊಂಡು ಗೋಳಗುಮಟಕ್ಕೆ ಬಂದರು. ಇಲ್ಲಿಯ ವಸ್ತು ಸಂಗ್ರಹಾಲಯದಲ್ಲಿಯ ಹಿಂದಿನ ಕಾಲದ ಕತ್ತಿ, ಢಾಲು, ಮತ್ತು ಕಲ್ಲಿನ ಪಾತ್ರೆಗಳನ್ನು ನೋಡಿ ಬೆರಗಾದರು. ಗೋಳಗುಮಟದ ಒಳಗೆ ಹೋಗಿ ಮೆಟ್ಟಲುಗಳನ್ನು ಏರಿ ಮೇಲೆ ಪ್ರದಕ್ಷಿಣೆ ಹಾಕಿದರು. ಮಾತನಾಡಿದರೆ ಏಳು ಸಾರೆ ಪ್ರತಿಧ್ವನಿಯಾಗುವ ಸೋಜಿಗವನ್ನು ಪ್ರತ್ಯಕ್ಷ ನೋಡಿದರು. ಇಲ್ಲಿಂದ ಹಾಗೇ ರೇಲ್ವೆ ಸ್ಟೇಶನ್ನಿಗೆ ಬಂದರು.

## ವಿಜಾಪುರ ರೇಲ್ವೆ ಸ್ಟೇಶನ

ಸ್ಟೇಶನ್ನಡ ನೆರೆಯಲ್ಲಿ ಟಾಂಗಾಗಳು ಒಂದೊಂದಾಗಿ ಬರುತ್ತಿದ್ದವು. ಇನ್ನೂ ಗಾಡಿ ಹೊರಡುವದು ತುಸು ತಡವಾಗಿ ಕಂಡಿತು. ಅದರಿಂದ ಇವರು ಸ್ಟೇಶನ್ನಕ್ಕೆ ಬಂದು ಒಳಗೆ ಪ್ರವೇಶಿಸಿದರು. ಇವರಲ್ಲಿ ಕೆಲವರು ಎಂದೂ ಉಗಿಬಂಡಿಯ ನಿಲ್ದಾಣವನ್ನು ನೋಡಿದ್ದಿಲ್ಲ. ಅವರಿಗೆ ಇಲ್ಲಿಯ ನೋಟದಿಂದ ಬಹಳ ಕೌತುಕವೆನಿಸಿತು. ಗುರುಗಳು ಇವರಿಗೆ ಪ್ಲ್ಯಾಟಫಾರ್ಮ, ಬುಕ್ಕಿಂಗಆಫೀಸ. ೧ ನೇ, ೨ ನೇ ತರಗತಿಯ ಪ್ರವಾಸಿಕರು ಕೂಡ್ರುವ ಸ್ಥಳಗಳನ್ನು ತೋರಿಸಿದರು. ಪ್ಲ್ಯಾಟಫಾರ್ಮಿನ ಮೇಲೆ ಬಿದ್ದರುವ ಪಾರ್ಸಲ್ಲು ಗಳನ್ನು ತೋರಿಸಿದರು. ತುಸು ಮುಂದಕ್ಕೆ ಹೋಗಿ ಮಾಲ ಗಾಡಿಯಿಂದ ಬರುವ ವಸ್ತುಗಳನ್ನು ಇಳಿಸುವದಕ್ಕಾಗಿ ಕಟ್ಟಿಸಿದ ದೊಡ್ಡ ವಖಾರವನ್ನು ತೋರಿಸಿದರು. ಇಷ್ಟರಲ್ಲಿ ಗಾಡಿಯು ಹೊರಡುವ ವೇಳೆಯಾಯಿತು. ಎಲ್ಲರೂ ಡಬ್ಬಿಗಳಲ್ಲಿ ಏರಿ ಕುಳಿತರು. ದಾರಿಯಲ್ಲಿ ಎರಡೂ ಮಗ್ಗಲುಗಳ ಹೊಲ ಗಳಲ್ಲಿಯ ಬೆಳೆಗಳನ್ನು ನೋಡುತ್ತ ಸ್ಟೇಶನ್ನುಗಳನ್ನು ಒಂದೊಂದಾಗಿ ದಾಟುತ್ತ ನಡೆದರು.

## ಸೀತಿಮನಿ ಸೇತುವೆ.

ಆಲಮಟ್ಟಿ ಸ್ಟೇಶನ ದಾಟಿದ ಕೂಡಲೆ ಕೃಷ್ಣಾ ನದಿಯ ಭವ್ಯವಾದ ಸೇತುವೆ ಬಂದಿತು. ಗಾಡಿಗಳಲ್ಲಿಯ ಪ್ರವಾಸಿಕರು ನದಿಯಲ್ಲಿ ರೊಕ್ಕಗಳನ್ನು

ತೋರಿ ಕೈಮುಗಿಯುವ ದೃಶ್ಯವನ್ನು ನೋಡಿ ಇವರಿಗೆ ಸೋಜಿಗವೆನಿಸಿತು ಎಲ್ಲರೂ ನಕ್ಕುಬಿಟ್ಟರು. ತುಸು ಮುಂದಕ್ಕೆ ಹೋಗುವಷ್ಟರಲ್ಲಿ ಗುಡ್ಡಗಳ ಸಾಲುಗಳು ಕಣ್ಣಿಗೆ ಬಿದ್ದವು. ಘಟಪ್ರಭಾ ನದಿಯು ಪ್ರವಾಹವು ಕಾಣ ತೊಡಗಿತು. ಗಾಡಿಯಿಂದಲೇ ಬಾಗಲಕೋಟೆಯ ಬಸವೇಶ್ವರ ಕಾಲೇಜದ ಇಮಾರತಿನ್ನು ನೋಡಿದರು. ಇಲ್ಲಿಂದ ಮುಂದೆ ಒಂದೇ ಸ್ಟೇಶನ್ ದಾಟಿದ ಕೂಡಲೆ ಬದಾಮಿಯ ಸ್ಟೇಶನ್ ಬಂದುಬಿಟ್ಟಿತು.

## ಬದಾಮಿಯ ಊರು

ಗಾಡಿ ಇಳಿದು ಟಾಂಗಾದ ಮೇಲಿಂದ ಊರಲ್ಲಿ ಬಂದು ಚಾಲುಕ್ಯರ ಕಾಲದ ಗುಡಿಗಳನ್ನು ನೋಡುತ್ತ ಮೇಣಬಸತಿ ಇರುವ ಸ್ಥಳಕ್ಕೆ ಹೋದರು ಅಲ್ಲಿ ಗುಡ್ಡದ ಓರೆಯಲ್ಲಿ ಒಂದಕ್ಕೊಂದು ಮಗ್ಗಲಿಗೆ ಇರುವ ನಾಲ್ಕು ಬಸತಿಗಳನ್ನು ನೋಡಿದರು. ಒಂದೇ ಕಲ್ಲಿನಲ್ಲಿ ಪೂರಾ ಗುಡಿಯನ್ನು ಕೊರೆದದ್ದು ನೋಡಿ ಬಹಳ ಕೌತುಕಪಟ್ಟರು. ಕಲ್ಲಿನಲ್ಲಿ ಕೊರೆದ ಅಂದ ಚಂದವಾದ ಗೊಂಬೆಗಳ ನೋಟದಿಂದ ಇವರಿಗೆ ಸೋಜಿಗವೆನಿಸಿತು. ಗುಡ್ಡದ ಅಡಿಯಲ್ಲಿ ಇರುವ ವಿಶಾಲವಾದ ಹೊಂಡವನ್ನು ನೋಡಿದರು. ಇಲ್ಲಿಂದ ಹಾಗೇ ಟಾಂಗಾದಲ್ಲಿ ಕುಳಿತು ಬನಶಂಕರಿಯ ದಾರೀ ಹಿಡಿದರು.

## ಬನಶಂಕರಿಯ ಕ್ಷೇತ್ರ.

ಇಲ್ಲಿಂದ ಒಂದೇ ಮೈಲು ಹೋಗುವಷ್ಟರಲ್ಲಿ ಬಾಳೆಯ ಬನಗಳೂ ತೆಂಗಿನ ಗಿಡಗಳೂ ಕಾಣಲಾರಂಭಿಸಿದವು. ಈ ಗಿಡಗಳ ಮಧ್ಯದಲ್ಲಿ ಒಳ್ಳೇ ರಮ್ಯವಾದ ಗುಡಿಯು ಕಾಣತೊಡಗಿತು. ಇದೇ ಬನಶಂಕರಿಯ ದೇವಾಲಯವು. ಗುಡಿಯ ಮುಂಭಾಗದಲ್ಲಿ ಇರುವ ಹೊಂಡವನ್ನು ನೋಡಿದರು. ಗುಡಿಯ ಒಳಗೆ ಹೋಗಿ ದೇವಿಯ ದರ್ಶನ ತಕ್ಕೊಂಡರು. ಪೂಜಾರಿಗಳ ಕಡೆಯಿಂದ ತೀರ್ಥ ತಕ್ಕೊಂಡು ಗುಡಿಯಲ್ಲಿಯೇ ತುಸು ಹೊತ್ತು ಕುಳಿತು ವಿಶ್ರಾಂತಿ ತಕ್ಕೊಂಡರು. ಸಮೀಪದ ಅಂಗಡಿಯಲ್ಲಿ ಬಾಳೆಯ ಹಣ್ಣುಗಳನ್ನು ತರಿಸಿ ಫಲಾಹಾರ ತೀರಿಸಿಕೊಂಡರು. ಇಲ್ಲಿಂದ ಸಮೀಪದಲ್ಲಿ ಇರುವ ಶಿವಯೋಗಮಂದಿರಕ್ಕೆ ಟಾಂಗಾಗಳನ್ನು ಸಾಗಿಸಿದರು.

## ಶಿವಯೋಗಮಂದಿರ

ಇಲ್ಲಿ ಗುಡ್ಡದ ಅಡಿಯಲ್ಲಿ ಬೈಲೊಳಗೆ ಮಲಪ್ರಭಾ ನದಿಯ ದಂಡೆಯ ಮೇಲೆ ಇರುವಂಥ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳ ಗದ್ದುಗೆಯ ದರ್ಶನ ತಕ್ಕೊಂಡರು. ಇಲ್ಲಿ ಸಂಸ್ಕೃತ ಅಧ್ಯಯನ ಮಾಡುವ ಮತ್ತು ಯೋಗಾಭ್ಯಾಸ ಮಾಡುವ ಸಣ್ಣ ಸಣ್ಣ ವಟುಗಳನ್ನು ನೋಡಿದರು. ಇಲ್ಲಿಯ ವಾಚನಾಲಯದಲ್ಲಿ ಸಂಗ್ರಹ ಮಾಡಿದ ಪುಸ್ತಕಗಳನ್ನು ಮತ್ತು ತಾಡವಾಲೆಯ ಎಲೆಗಳಲ್ಲಿಯ ಬರಹಗಳನ್ನು ಅಲ್ಲಿಯ ಮ್ಯಾನೇಜರರು ಇವರಿಗೆ ತೋರಿಸಿದರು. ಇಲ್ಲಿಂದ ತುಸು ಮುಂವಕ್ಕೆ ಹೋಗುವಷ್ಟರಲ್ಲಿ ಮಹಾಕೂಟೇಶ್ವರನ ಗುಡಿಯು ಕಾಣಹತ್ತಿತು.

## ಮಹಾಕೂಟ

ಈ ಗುಡಿಯು ಬಹಳ ಪುರಾತನ ಕಾಲದ್ದೆಂದು ಗುರುಗಳು ಹೇಳಿದರು. ಈ ಸ್ಥಳದಲ್ಲಿ ಹಿಂದೆ ಋಷಿಗಳು ತಪಸ್ಸು ಮಾಡಿದ್ದರೆಂದೂ ಹಿಂದಿನ ಕಾಲಕ್ಕೆ ಇದೊಂದು ದೊಡ್ಡ ಕ್ಷೇತ್ರವಾಗಿತ್ತೆಂದೂ ಹೇಳಿದರು. ಇಲ್ಲಿಯ ಹಾಳಾದ ಗುಡಿಗಳನ್ನು ನೋಡಿದರು. ಗುಡ್ಡದೊಳಗಿಂದ ಹರಿಯುವ ಸಣ್ಣ ಝುರಿಯನ್ನು ನೋಡಿಕೊಂಡು ಬದಾಮಿಯ ಊರ ದಾರೀ ಹಿಡಿದರು. ಈ ಊರಿಂದ ಸ್ಟೇಶನ್ನಿಗೆ ಬಂದು ಬಾಗಲಕೋಟೆಗೆ ಬಂದರು.

## ಬಾಗಲಕೋಟೆಯ ಪೇಟೆ.

ಈ ಊರಲ್ಲಿ ನೋಡತಕ್ಕಂಥ ಯಾವ ಪ್ರಸಿದ್ಧ ಸ್ಥಳವೂ ಕಂಡುಬರ ಲಿಲ್ಲ. ಆದಾಗ್ಯೂ ಈ ಊರು ವ್ಯಾಪಾರಕ್ಕಾಗಿ ಪ್ರಸಿದ್ಧವಾದದ್ದೆಂದು ಅವರಿಗೆ ಗೊತ್ತಿತ್ತು. ಅದಕ್ಕಾಗಿ ಪೇಟೆಯನ್ನು ನೋಡಬೇಕೆಂದು ಊರಲ್ಲಿ ಹೊರಟರು. ಮೊದಲು ಇವರ ಕಣ್ಣಿಗೆ ಅರಿವೆಯ ಅಂಗಡಿಗಳು ಕಂಡವು. ಹಾಗೇ ಮುಂದೆ ಹೋಗಿ ಕಾಳಿನ ಅಂಗಡಿಗಳನ್ನು ನೋಡಿದರು. ಕಾಯಿಪಲ್ಲೆಯ ಮಾರ್ಕೆಟಿನಲ್ಲಿಯ ಹಣ್ಣಿನ ಅಂಗಡಿಗಳನ್ನು ಮಗ್ಗಲಿಗೆ ಇರುವ ಕಿರಾಣೀ ಅಂಗಡಿಗಳನ್ನು ನೋಡಿದರು. ಇವನ್ನೆಲ್ಲ ನೋಡಿಕೊಂಡು ಮೋಟಾರ ಸ್ಟ್ಯಾಂಡಿಗೆ ನಡೆದರು.

ಇಲ್ಲಿಂದ ಬೀಳಗಿ, ಗಲಗಲಿ ಮೇಲಿಂದ ಮೊದಲು ಮುಧೋಳಕ್ಕೆ ಬಂದರು. ಇಲ್ಲಿ ಮೋಟಾರ ಬದಲಾಯಿಸಿ ಬೇರೆ ಮೋಟಾರಿನಲ್ಲಿ ಕುಳಿತು ಮಹಾಲಿಂಗಪುರಕ್ಕೆ ಬಂದರು.

ಈ ಪ್ರವಾಸದಿಂದ ಅವರಿಗೆ ಇಡೀ ಜಿಲ್ಹೆಯ ಪರಿಚಯವಾದಂತಾಯಿತು. ಅಲ್ಲಲ್ಲಿ ನೋಡಿದ ಕ್ಷೇತ್ರಗಳನ್ನು ಮತ್ತು ಐತಿಹಾಸಿಕ ಕಟ್ಟಡಗಳನ್ನು ಮೇಲೆ ಮೇಲೆ ನೆನಪಿಗೆ ತಂದು ಆನಂದಪಟ್ಟರು.

---

## ೨೫. ಜಿಲ್ಹೆಯ ಹೆಚ್ಚಿನ ವಿವರಣೆ.

ವಿಜಾಪುರ ಜಿಲ್ಹೆಯ ಹತ್ತು ತಾಲೂಕುಗಳು ಮತ್ತು ಒಂದು ಪೇಠಾ ಇದ್ದು, ಪ್ರತಿ ತಾಲೂಕಿನಲ್ಲಿಯ ಊರುಗಳ ಸಂಖ್ಯೆ ಮತ್ತು ಜನಸಂಖ್ಯೆಯು ಕೆಳಗಿನಂತೆ ಅವೆ:—

| ಅ. ನಂ. | ತಾಲೂಕಿನ ಹೆಸರು | ಊರುಗಳ ಸಂಖ್ಯೆ | ಜನಸಂಖ್ಯೆ |
|---|---|---|---|
| ೧. | ವಿಜಾಪೂರ ತಾಲೂಕು | ೧೦೯ | ೨೦೯೨೮೩ |
| ೨. | ಇಂಡಿ | ೧೨೩ | ೧೪೧೨೭೯ |
| ೩. | ಸಿಂದಗಿ ,, | ೧೪೪ | ೧೩೦೫೨೩ |
| ೪. | ಬಾಗೇವಾಡಿ ,, | ೧೧೯ | ೧೩೭೦೨೯ |
| ೫. | ಮುದ್ದೇಬಿಹಾಳ | ೧೫೨ | ೧೧೨೪೧೯ |
| ೬. | ಹುನಗುಂದ | ೧೫೯ | ೧೩೫೫೨೬ |
| ೭. | ಬಾಗಲಕೋಟೆ ,, | ೯೧ | ೧೦೩೬೦೧ |
| ೮. | ಬದಾಮಿ ,, | ೧೪೬ | ೧೩೬೩೯೬ |
| ೯. | ಜಮಖಂಡಿ | ೬೯ | ೧೪೩೨೭೪ |
| ೧೦. | ಮುಧೋಳ | ೭೭ | ೮೩೨೬೮ |
| ೧೧. | ಬೀಳಗಿ ಪೇಠಾ | ೬೫ | ೫೯೧೮೭ |
| | ಒಟ್ಟು— | ೧೨೫೪ | ೧೩೯೬೧೮೫ |

ಟೀಪು:— ಈ ಅಂಕಿಗಳು ೧೯೫೧ನೇ ಇಸವಿಯ ಖಾನೇಸುಮಾರಿಯ ಲೆಕ್ಕದಂತೆ ಹೊರಟಂಥವು ಅವೆ.

## ಪ್ರಶ್ನೆಗಳು.

(೧) ವಿಜಾಪುರದಲ್ಲಿಯ ಪ್ರಸಿದ್ಧ ಐತಿಹಾಸಿಕ ಕಟ್ಟಡಗಳಾವವು?

(೨) ವಿಜಾಪುರದಲ್ಲಿಯ ವಿದ್ಯಾಸಂಸ್ಥೆಗಳು ಯಾವವು?

(೩) ಕೆಳಗಿನ ಊರುಗಳಲ್ಲಿ ನೋಡತಕ್ಕದ್ದು ಏನು ಅದೆ? ಬಬಲೇಶ್ವರ, ಹಿಟ್ಟಿನಹಳ್ಳಿ, ಮಮದಾಪೂರ, ರಾಮತೀರ್ಥ, ಇಂಚಗೇರಿ.

(೪) ಇಂಡಿ ಮತ್ತು ಮಹಾಲಿಂಗಪೂರ, ಊರುಗಳಲ್ಲಿ ನೊಡತಕ್ಕ ಗುಡಿಗಳು ಯಾವವು ಅವೆ?

(೫) ಕೆಳಗಿನ ವಾಕ್ಯಗಳಲ್ಲಿ ತೆರವಿದ್ದ ಸ್ಥಳಗಳನ್ನು ತುಂಬಿರಿ.

(i) ವಿಜಾಪುರದಿಂದ ಸಿಂದಗಿಯು..........ಕ್ಕೆ ನಾಲ್ವತ್ತು ಮೈಲಿನ ಮೇಲೆ ಅದೆ.

(ii) ಗೋಲಗೇರಿಯಲ್ಲಿ..........ಎಂಬ ದೇವರ ಗುಡಿಯು ಅದೆ?

(೬) ಬಾಗೇವಾಡಿಗೆ ಬಸವನಬಾಗೇವಾಡಿ ಎಂದು ಏಕೆ ಅನ್ನುತ್ತಾರೆ?

(೭) ತಾಳೀಕೋಟಿಯಲ್ಲಿ ಏನು ತಯಾರಾಗುತ್ತವೆ?

(೮) ಜಮಖಂಡಿಯಲ್ಲಿ ನೋಡತಕ್ಕ ಪ್ರಸಿದ್ಧ ಗುಡಿಗಳು ಯಾವವು?

(೯) ಬಾಗಲಕೋಟಿಯು ಯಾವ ವ್ಯಾಪಾರಕ್ಕೆ ಪ್ರಸಿದ್ಧವಾಗಿದೆ?

(೧೦) ಕೆಳಗಿನ ಹೆಸರುಗಳು ಹೇಗೆ ಬಂದಿವೆ:—

ಬಬಲೇಶ್ವರ, ಯಲಗೂರ, ಮಹಾಲಿಂಗಪೂರ, ಜಮಖಂಡಿ.

(೧೧) ಕೆಳಗಿನ ವಾಕ್ಯಗಳಲ್ಲಿಯ ತೆರವಿದ್ದ ಜಾಗೆ ತುಂಬಿರಿ.

(ಅ) ಬಾಗಲಕೋಟಿಯು ವಿಜಾಪುರದಿಂದ........ಮೈಲಿನ ಮೇಲೆ ಅದೆ.

(ಆ) ..........ವು ರನ್ನನ ಜನ್ಮಸ್ಥಳವು.

(ಇ) ಹತ್ತಿಯು..........ತಾಲೂಕಿನಲ್ಲಿ ಹೆಚ್ಚು ಬೆಳೆಯುತ್ತದೆ.

(೧೨) ಜಮಖಂಡಿ ತಾಲೂಕಿನಲ್ಲಿ ಉತ್ತಮ ಕಂಬಳಿಗಳು ಎಲ್ಲಿ ತಯಾರಾಗುತ್ತವೆ.

(೧೩) ಬಾಗಲಕೋಟೆಯಿಂದ ತೇರದಾಳಕ್ಕೆ ಹೋಗುವ ಸಮೀಪದ ಮಾರ್ಗದಲ್ಲಿ ಹತ್ತುವ ಮೂರು ದೊಡ್ಡ ಊರುಗಳನ್ನು ಹೇಳಿರಿ.

(೧೪) ಕೆಳಗೆ ಕಾಣಿಸಿದ ಊರುಗಳಲ್ಲಿ ಏನು ತಯಾರಾಗುತ್ತವೆ? ಲೋಕಾಪುರ, ಮಹಾಲಿಂಗಪೂರ, ಕಲಾದಗಿ, ಬೆಳವಲಕೊಪ್ಪ.

(೧೫) ವಿಜಾಪುರ ಜಿಲ್ಹೆಯಲ್ಲಿ ಉತ್ತಮ ಖಣಗಳು ಎಲ್ಲಿ ತಯಾರ ಆಗುತ್ತವೆ? ಎರಡು ಊರುಗಳನ್ನು ಹೇಳಿರಿ.

(೧೬) ಈ ಜಿಲ್ಹೆಯಲ್ಲಿ ಉತ್ತಮ ಸೀರೆಗಳು ಎಲ್ಲೆಲ್ಲಿ ತಯಾರಾಗುತ್ತವೆ? ನಾಲ್ಕು ಊರುಗಳ ಹೆಸರು ಹೇಳಿರಿ.

(೧೭) ಕೆಳಗಿನ ಊರುಗಳಲ್ಲಿ ನೋಡತಕ್ಕದ್ದು ಏನು ಪ್ರಸಿದ್ಧವದೆ? ನಿಂಬರಗಿ, ಸಂಗಮ, ಐಹೊಳಿ, ಲಚ್ಯಾಣ.

(೧೮) ಕೆಳಗಿನ ವಾಕ್ಯಗಳಲ್ಲಿ ತೆರವಿದ್ದ ಸ್ಥಳಗಳನ್ನು ತುಂಬಿರಿ.

( ಅ ) ಕುಂದರಗಿಯಲ್ಲಿ............ತಯಾರಾಗುತ್ತವೆ.

( ಬ ) ತೊರವಿಯಲ್ಲಿ............ದೇವರ ಗುಡಿಯು ಪ್ರಸಿದ್ಧವದೆ.

( ಕ ) ಬಾಗಲಕೋಟೆಯಲ್ಲಿ............ಕಾರಖಾನೆಯು ಆಗಿದೆ.

( ಡ ) ............ಯ ಸುತ್ತು ಮುತ್ತು ಪರಶೀ ಕಲ್ಲುಗಳು ಹೆಚ್ಚಾಗಿ ಹೊರಡುತ್ತವೆ.



## ೩ನೆಯ ವರ್ಗದ ವಿದ್ಯಾರ್ಥಿಗಳಿಗಾಗಿ

## ನಮ್ಮಲ್ಲಿ ದೊರೆಯುವ ಅತ್ಯುಪಯುಕ್ತ ಪುಸ್ತಕಗಳು



---


ಮುದ್ರಕರು:- ವಿಜಾಪುರ ಉಪಲಿಬುರುಜದ ಹತ್ತಿರ ಇರುವ ರಾ|| ಬ|| ಫ. ಗು ಹಳಕಟ್ಟಿಯವರ "ಹಿತಚಿಂತಕ ಪ್ರಿಂಟಿಂಗ ಪ್ರೆಸ್" ವಾರ್ಡ ನಂ ೨ ರಲ್ಲಿ ಮುದ್ರಿಸಿದ

ಪ್ರಕಾಶಕರು:- ಶ್ರೀ ಬಿ. ಎಸ್. ಬೂದಿಹಾಳ ಮುಕ್ಕಾಮ ವಿಜಾಪುರ ಇವರು ವಿಜಾಪುರದ ಶಾಳೇಬಝಾರ ಓಣಿಯಲ್ಲಿ ಮನೆ ನಂಬರ್ ೧೫೨೨ರಲ್ಲಿ ಪ್ರಸಿದ್ಧಿಸಿದರು